# ಶ್ರೀ ಎರ್ರಿತಾತಯ್ಯನವರ ಲಾವಣಿ

॥ ಧಾಟಿ ಖಡೀಚಾಲ್ ॥

ಪರಶಿವಕರುಣದಿ ಧರೆಯೊಳು ಜನಿಸಿದ ಎರ್ರಿಸ್ವಾಮಿ ಚರಿತೆಯಸಾರ |
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲಿಸುತ್ತಿರುವ [illegible]



॥ ಪಲ್ಲವ ॥

ಶೃಂಗಾರವಾಗಿಹ ಬೆಂಗ್ಳೂರ್ ಜಿಲ್ಲೆಯ ದೊಡ್ಡಬಳ್ಳಾಪುರ ಬಳಿಯಲ್ಲಿ |
ಲಿಂಗನಹಳ್ಳಿಲಿ ನೀಲ ಕಂಠಾರಾಧ್ಯರು ವಾಸವಿದ್ದರು ವಿಭವದಲಿ ||
ಜಂಗಮರಲಿ ಬಲು ಶ್ರೇಷ್ಠತ್ವ ಪಡೆದು ಶಾಲೇಲಿ ವಿದ್ಯೆವ ಕಲಿಸುತಲಿ |
ಲಿಂಗ ಮೂರುತಿಯು ತಪವಾಚರಿಸುತ ಪುತ್ರನ ಪಡೆಯುವಾ ಕಾಂಕ್ಷೆಯಲಿ ||
ಮಂಗಳಾಂಗಿ ಸತಿ ನಿರ್ಮಳಾಂಬಿಕೆಯ ಪಾತಿವ್ರತ್ಯ ಪ್ರಭಾವದಲಿ |
ಜಂಗಮರೊಡೆಯನು ಸತಿ ಪತಿಬಯಕೆಯ ಸಾಂಗವ ಗೊಳಿಸಿದ ಕರುಣದಲಿ ||
ಲಿಂಗನ ಅಂಶದ ಪುತ್ರನ ಪಡೆದರು, ನವಮಾಸಾಂತ್ಯ ಪೂರ್ಣದಲಿ |
ಅಂಗವ ನೋಡಲು ಮಂಗಳ ವಾಗಿರೆ ಭಕ್ತರ ಬಂಧು ಎನಿಸುತಲಿ ||

॥ ಚಾಲ್ಹೊಡಾ ॥

ಕಂದನ ಪಡೆದಾನಂದದೊಳೊಂದಿನ ನಾಮಕರಣವನು ಗೈಯ್ಯುತಲಿ |
ಚಂದದಿ ಗ್ರಹಗಳು ಮೇಲೆನಿಸಿದ್ದವು ನಂಜುಂಡಾರ್ಯನ ನಾಮದಲಿ ||
ಅಂದಿನ ದಿನವೇ ಕರೆಸುತ ಗುರುವನು ಲಿಂಗಧಾರಣೆಯ ಗೊಳಿಸುತಲಿ |
ಬಂಧು ಬಳಗವೆಲ್ಲ ಬಂದು ಈ ಶಿಶುವಿಗೆ ಆಶೀರ್ವಾದವನೆಸಗುತಲಿ ||

॥ ಚಿಕ್ಕೊಡಾ ॥

ಕೆಲಕಾಲವು ಕಳೆಯಲು ಬಾಲ ಲೀಲೆಗಳ ಚೆಂದ |
ನೀಲಕಂಠಾರಾಧ್ಯರು ನೋಡಿ ಮಗನ ನಲವಿಂದ ||
ಕಲಿಸುತ್ತ ಕನ್ನಡ ಆಂಗ್ಲ ಭಾಷೆ ಮೊದಲಿಂದ |
ಒಲುಮೆಯೊಳು ಷಡಾಕ್ಷರ ಮೂಲ ತಿಳಿಸಿ ಕ್ರಮದಿಂದ ||

॥ ಗುಲ್‌ವುಡನ್ ॥

ಶ್ರವಣ ಮನನಿಧಿ ಧ್ಯಾಸವನ್ನು ।
ನವ ವಿಧ ಭಕ್ತಿಯ ಭಾವವನು ।
ಆವನ್ನಿಯಾ ಸರ್ವ ಧರ್ಮವನ್ನೂ ।
ತವರಿಸಿ ಓಂಕಾರನಾದಸ್ವರೂಪ ಸತ್‌ಚಿತ್ತಾನಂದವನು ॥

॥ ಶ್ಲೋಕ ॥

ಮಾತಾಪಿತ್ರರು ಪುತ್ರನನ್ನು ಪ್ರೀತಿಲ್ಪೋಷಣೆ ಗೈಯ್ಯಲು ।
ಪುತ್ರ ಪಡೆದು ಪ್ರಾಪ್ತ ಯೌವ್ವನ ವಿದ್ಯಾಭ್ಯಾಸಕೆ ವೊಪ್ಪಲು ॥

॥ ಚಾಲ್ ॥

ಕರೆಸಿ ಕೇಳಿದರು ಮಾತಾಪಿತ್ರರು ಪುತ್ರನಭೀಷ್ಟವ ಮನಸಾರಾ ॥
ಪರಿಪೂರ್ಣತೆಯಲಿ ಭಕ್ತರ ಬಯಕೆಯು ಸಲ್ಲಿಸುತ್ತಿರುವರು ನಿರಂತರಾ

೧

ವೀರಶೈವ ಬ್ರಾಹ್ಮಣರೆಂದೆನಿಸುತ ನಂಜುಂಡಯ್ಯ ನಂಜಯ್ಯನೆನಿಸಿ ।
ಮೆರೆಯುವ ಮೈಸೂರ್ ನಗರದೊಳಿರುವ ವಿದ್ಯಾಶಾಲೆಯೊಳು ಮನವಿರಿಸಿ ॥
ಅರಿಯಿರಿ ಈತನು ವಿದ್ಯಾಭ್ಯಾಸದೆ ಧೃಢತರ ಮನವನು ಸ್ಥಿರಗೊಳಿಸಿ ।
ಪರಿ ಪರಿದ್ಯೆಯು ಕಲಿತು ಪಾರಂಗತನಾಗುತ ಮೇಲ್ಮೆಯ ಸಂಗಳಿಸಿ ॥
ಅರಿಯುತ ಶಾಲೆಯ ಪ್ರಾಚಾರ್ಯರು ಬಹು ಪಾಠಗಳನ್ನು ವಿಸ್ತರಿಸಿ ।
ಸರದಿಯ ತೆರದೊಳು ಪ್ರಾಚಾರ್ಯರಿಗೆ ಪಾಠಗಳೆಲ್ಲವ ಶೃತಪಡಿಸಿ ॥
ಮರೆಯದೆ ಪಾಠವ ಪಾಠಕರೆದುರೊಳು ತಪ್ಪಿಲ್ಲದೆಯೆ ಸ್ಥಿರಪಡಿಸಿ ।
ಈ ಕ್ರಮದಿಂದದಲಿ ವಿದ್ಯೆಯ ಪಡೆದರು ಪೂರ್ಣಾನಂದವನನುಭವಿಸಿ ॥

॥ ಚಾಲ್‌ವುಡನ್ ॥

ಇದ್ದರು ನಾಲ್ಕಾರ್ ತರಗತಿಯೊಳಗೆ ಶ್ರದ್ಧೆಲಿ ವ್ಯಾಸಂಗ ಮಾಡುತ್ತಾ ।
ಸಿದ್ಧಿ ಗಣಪತಿಯು ಸರಸ್ವತಿಯು ಸಹ ಪರಿ ಪೂರ್ಣ ಕರುಣವ ಬೀರುತ್ತಾ ॥

ಸದ್ಗುಣದಿಂದಲಿ ಸಕಲ ವಿದ್ಯೆಯನು ಪಾಠಶಾಲೆಯೊಳು ಕಲಿಯುತ್ತಾ ।
ಮುದ್ದು ಶಿಷ್ಯನಾಗಿ ಸದ್ಧರ್ಮ ನಡೆತೆಯಲಿ ಉಪಾಧ್ಯಾಯರಲಿ ನಡೆಯುತ್ತಾ ॥

॥ ಚಿಕ್ಕವುಡನ್ ॥

ಉಪಾಧ್ಯಾಯರ ಪ್ರೀತಿಗೆ ಪಾತ್ರರಾಗಿ ಇದ್ದವರು ।
ಅಪರೂಪವಾದ ವಿದ್ಯೆ ಶ್ರದ್ಧೆಯಿಂದ ಪಡೆದವರು ।
ಸಫಲತೆಯಿಂದ ತವರ್ಮೂರಿಗೆ ಬಂದು ಇವರು ।
ಬೋಪರಿ ಮಾತಾಪಿತ್ರರ ಪ್ರೀತಿಯನ್ನು ಪಡೆದವರು ॥

॥ ಗುಲ್‌ವುಡನ್ ॥

ತಂದೆತಾಯಿ, ನೋಡುತ ಮಗನನ್ನು ।
ಬಂದಿದ್ದ ಯೌವ್ವನದೆಶೆಯನ್ನು ।
ಚಂದದಿ ಗೈಯ್ಯಲು ಮದುವೆಯನೂ ।
ಹೊಂದಿಸಿ ಮಗನ ಮನವನು ಆಗ ಹುಡುಕಲು ಕನ್ಯೆಯನು ॥

॥ ಶೋಕ ॥

ಒಳ್ಳೆ ವಂಶದ ವಧುವ ನೋಡುತ ಮದುವೆ ಗೈಯ್ಯುವ ಸಂಭ್ರಮ ।
ಎಲ್ಲ ಲಕ್ಷಣ ವಧುವರರಿಗೆ ಒದಗಿ ಬಂದಿತು ಸುಕ್ರಮ ॥

॥ ಚಾಲ್ ॥

ಪರಮ ಸಾತ್ವಿಕರು ಕೋಲಾರ ವಾಸಿ ಶಿವಪ್ಪಸುತೆ ಮಂಜುಳೆ ಪೆಸರಾ ।
ಪರಿ ಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

ರೂಢಿಯೊಳಗೆ ಶ್ರೀ ನಂಜುಂಡಾರಾಧ್ಯರು ಸದ್ಗುಣ ಸಂಪನ್ನನಾಗಿರಲು ।
ನೋಡುತ ಮಾತಾಪಿತ್ರರು ಮಗನಿಗೆ ವಧುವು ಸರಿ ಜೊತೆಯಾಗಿರಲು ॥
ಕೂಡಿ ಬಂದಿತು ಶುಭ ಮುಹೂರ್ತವು ದಂಪತಿ ಈರ್ವರ ಪೆಸರಿನೊಳು ।
ಒಡನೆಯೆ ಮದುವೆ ಮಾಡುತಲಾಗ ಪರಮ ಸಂತೋಷವ ಪಡುತಿರಲು

ಜೋಡಿಸಿ ಕರಗಳ ಸತಿ ಪತಿ ಈರ್ವರು ಗುರು ಹಿರಿಯರಿಗೆರಗುತ್ತಿರಲು ।
ಒಡನೆ ಸಂಸಾರವ ಮಾಡುತಲಾಗ ಪರಮ ಸಂತೋಷದಿ ಇರುತಿರಲು ॥
ಪಡೆಯುತ ಮಕ್ಕಳ ಕೆಲ ದಿನ ನಂತರ ಸಂಸಾರ ಹೆಚ್ಚಾಗುತ ಬರಲು ।
ನಡೆಸಲು ಸಂಸಾರ ಕಷ್ಟವು ಕಾಣಲು ಧನ ಮುಗ್ಗಟ್ಟಿನ ವಿಷಯದೊಳು ॥

॥ ಚಾಲ್‌ವುಡನ್ ॥

ಉತ್ತಮ ದರ್ಜೆಲಿ ತೇರ್ಗಡೆ ಪೊಂದಿದ ನಂಜುಂಡಾರಾಧ್ಯಗೆ ಸರಕಾರಾ ।
ಇತ್ತರು ಮೊದಲಲಿ ಜಡ್ಜಿಯ ಪದವಿಯ ನಡೆಸುತ ಕೋರ್ಟಿನ ನ್ಯಾಯಪರಾ
ಮತ್ತೆಲೆ ಇತ್ತರು ಪುರ ಪ್ರಾಂತ್ಯಗಳ ಜಿಲ್ಲಾ ಕಲೆಕ್ಟರ್ ಅಧಿಕಾರಾ ।
ಸುತ್ತುತ ಸಳಿಯೊಳು ಪದವಿಗಳೆಲ್ಲವು ವರ್ಜಿಸಿಬಿಟ್ಟರು ಅಧಿಕಾರ ॥

॥ ಚಿಕ್ಕವುಡನ್ ॥

ವೈರಾಗ್ಯ ಹುಟ್ಟಿತು ನಂಜುಂಡಾರಾಧ್ಯಗೆ ಆಗ ।
ವರ ಸತಿ ಸುತರನ್ನು ತೊರೆದು ಬಿಟ್ಟು ಬಲು ಬೇಗ ।
ಬರಿ ಭ್ರಾಂತಿ ಪ್ರಪಂಚವು ಎಂದು ತಿಳಿದರಾವಾಗ ।
ಅರಿಷಡ್ವರ್ಗವನು ದೂರ ಮಾಡುತ ಬರಲಾಗ ॥

॥ ಗುಲ್‌ವುರ್ಡ ॥

ಮಾನವ ಜನ್ಮದಿ ಈ ತೆರದಾ ।
ಜ್ಞಾನ ಭಂಡಾರ ಪಡೆದು ಬಂದಾ ।
ಘನತರ ಮಹಾತ್ಮ್ಯೆ ತಿಳಿದಿದ್ದ ।
ತನ್ನಿಂದ ತಾನೇ ತಿಳಿಯುತ ಮನದೊಳು ನೆನೆಯುತ ಗುರುಪಾದ ॥

॥ ಶ್ಲೋಕ ॥

ಪಾರಮಾರ್ಥದ ಸಾರವನ್ನು ತಿಳಿಯಲು ಮನ ಬಂದಿತು ।
ಗುರುವಿನಂಘ್ರಿಯ ಸ್ಮರಿಸಲಾಗ ಮರವೆ ಎಲ್ಲವು ಕಳೆದಿತು ॥

॥ ಚಾಲ್ ॥

ಗುರುವಿನ ಚಿಂತನೆ ಮಾಡುತಲಿರುತಿರೆ ಗುರುವುವದಗಿ ಸಾಕ್ಷಾತ್ಕಾರ ।
ಪರಿ ಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೩ ॥

ಸಂಧಿತ ಲಿಂಗಾಯ್ತ ನಾಗಪ್ಪನವರ ಶಿಶ್ರೂಷೆಯನ್ನು ಮಾಡುತ್ತ ।
ಚಂದದಿ ವೇದಾಗಮಗಳ ಬೋಧಿಸಿ ಸ್ವಾನಂದನುಭವ ತಿಳಿಸುತ್ತಾ ॥
ಮಂದಿರ ಮಧ್ಯದಿ ಪೀಠನ ಸ್ಥಾಪಿಸಿ ಸೋಹಂಭಾವವ ತಿಳಿಸುತ್ತ ।
ಚಂದಿರ ಧರನನು ಹೊಂದಿಸಿಕೊಳ್ಳುವ ಮಂದಿರವನ್ನೂ ರಚಿಸುತ್ತಾ ॥
ಬಂಧಕ ಪೊಂದಿದ ನಶ್ವರ ದೇಹವ ಮಾಯಾ ಪಾಶವ ದೂರಿಡುತಾ ।
ಒಂದಕ್ಷರದ ಚಂದವ ತಿಳುಹಿಸಿ ಮಂದಹಾಸನವನು ಮಂಡಿಸುತಾ ॥
ಸುಂದರ ಗುರುವಿಂದ ಒಂದೊಂದು ಬಿಡದೆಲೆ ಬಂಧ ವಿಮುಕ್ತನ ಕಲಿಯುತ್ತಾ ।
ರಂಧ್ರವ ಕೊರೆದು ಶಿಷ್ಯನ ಮನಸಿಗೆ ಸಂಶಯವೆಲ್ಲಾ ಬಿಡಿಸುತ್ತಾ ॥

॥ ಚಾಲ್‌ವುರ್ದ ॥

ಮತಿಯುತ ನಾಗುತ ಧಾತ್ರಿಲಿ ನೀನು ಸುನೀತ ನಾಗ್ಯ ಗುಣಭರಿತಾ ।
ಮುಕ್ತಿಸೋಪಾನದ ಜ್ಯೋತಿಯ ಕಂಡು ನೇತ್ರಾನಂದವ ಪಡೆಯುತ್ತಾ ॥
ಸ್ಮೃತಿ ಇತಿಹಾಸ ಪುರಾಣ ಪ್ರಮಾಣದ ಮೂಲ ಮಂತ್ರವನು ಜಪಿಸೆನುತಾ ।
ಕ್ಷಾತ್ರವ ತ್ಯಜಿಸುತ ಶಾಂತಿದಾಂತಿಯೊಳು ಪುರುಷನಾಗಿ ನೀ ಬಾಳೆನುತಾ ॥

॥ ಚಿಕ್ಕವುರ್ದ ॥

ನನ್ನಲ್ಲಿದ್ದ ವಿದ್ಯೆಯನು ಧಾರೆ ಎರೆದೆ ನಾ ನಿನಗೆ ।
ನನಗಿಂತ ಪೂರ್ಣಸುಜ್ಞಾನ ವಿರುವುದ್ನಿನ್ನೊಳಗೆ ॥
ಘನ ಪರಂಜ್ಯೋತಿ ಪರಮಾತ್ಮನ ತಿಳಿ ಇದರೊಳಗೆ ।
ಎನ್ನುತ ಆಶೀರ್ವಾದ ಗೈದರಾಗ ಶಿಷ್ಯನಿಗೆ ॥

॥ ಗುಲ್‌ವುರ್ದ ॥

ಗುರುವಿನ ಕರುಣೆಯನ್ನು ಪಡೆದು ।
ಅರುವಿಲ್ಲ ಗನಾರ್ಯರಲ್ಲಿ ಬಂದು ॥

ಎರಡು ಮೂರು ದಿನಗಳು ಕಾದಿದ್ದೂ ।
ದರುಶನಕೊಟ್ಟು ಆಜ್ಞೆಯನಿತ್ತರು ಪರೀಕ್ಷಿಸಬೇಕೆಂದೂ ॥

॥ ಶ್ಲೋಕ ॥

ಚಿತ್ತಲಾಗಿಯೇ ಸುತ್ತಿ ಗ್ರಾಮವ ಮೂರು ಸಲ ಬಾಯೆನ್ನುತಾ ।
ಇತ್ತ ಆಜ್ಞೆಯ ತಪ್ಪದಂತೆ ಗುರುವಿನ್ನ್ಯಪೆಯನು ಪಡೆಯುತಾ ॥

॥ ಚಾಲ್ ॥

ಶರೀರ ಡಂಭವ ತೋರಿದು ನಂಜುಂಡಯ್ಯ ಗುರುಸೇವೆ ಗೈಯ್ಯುತ ಮನಸಾರಾ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೪ ॥

ಗುರು ಗಗನಾರ್ಯರ ಬಳಿಯೊಳು ಕಲಿತರು ಪಾರಮಾರ್ಥವನು ಮನಸಿಟ್ಟು ।
ಗುರುಗಳು ರಚಿಸಿದ ಗ್ರಂಥ ಒಂದಿದ್ದಿತು ಶಿಥಿಲವಾಗಕ್ಷರ ಬೇರ್ಪಟ್ಟು ॥
ಗುರುವರ ಚಿಂತಿಪ ವಿಚಾರ ತಿಳಿದು ಬರೆಯುವೆ ಕೊಡಿ ಗ್ರಂಥ ದಯವಿಟ್ಟು ।
ಮರೆತು ಬಿಟ್ಟಿದ್ದೇನೆ ಅಕ್ಷರ ನಾನು ನೀನು ಬರೆಯಲದು ಹ್ಯಾಗುಂಟು ॥
ಗುರುವು ಬಹಿರ್ದೇಶಕೆ ತೆರಳಿದ ಸಮಯದೊಳು ಗ್ರಂಥವೆಲ್ಲಾ ಬರೆದಿಟ್ಟು ।
ಗುರುವು ಬಂದು ಆಶ್ರಮದೊಳಗೆ ಗ್ರಂಥನೋಡಿ ಹುರುಷವ ಪಟ್ಟು ॥
ಪರಿ ಪೂರ್ಣನಾದೆ ನಂಜಯ್ಯ ನೀನು ನಿರಂಜನೆಂಬ ಬಿರುದನು ಕೊಟ್ಟು ।
ಗುರುವಿಗೆ ತೋರಲು ಪವಾಡಗಳನು ಪರಮ ಪುನೀತನು ನೀನುಂಟು ॥

॥ ಚಾಲ್‌ವೃದ್ಧ ॥

ಕರೆಸುತಲಿದ್ದರು ಕೃಷ್ಣರಾಜೇಂದ್ರರು ಗುರು ಗಗನಾರ್ಯರ ಬೋಧನೆಗೆ ।
ಪರಿಚಯ ಮಾಡಿವರ ಶಿಷ್ಯನನ್ನು ಕಳಿಸುತ್ತಿರಲು ಮೈಸೂರಿಗೆ ॥
ವರ ವೇದಾಂತದ ತರ್ಜುಮೆಯೆಲ್ಲವ ವಿವರವಿತ್ತು ರಾಜರ ಸಭೆಗೆ ।
ಗುರುವಿಗೆ ವ್ಯತ್ಯಯ ಒದಗಲು ಆಗ ಶಿಷ್ಯನಿಲ್ಲದೆ ತನ್ನ ಬಳಿಯೊಳಗೆ ॥

॥ ಚಿಕ್ಕವೃದ್ಧ ॥

ಗುರು ಕೊರಗುತಿದ್ದುದನು ಕಂಡ ಯೋಗ ದೃಷ್ಟಿಯಲಿ ।
ಅರೆನಿಮಿಷದಿ ನಿಜ ರೂಪಾಗಿ ಬಂದು ಗುರು ಬಳಿಲಿ ॥

ಗುರು ಕೋರಿಕೆ ಸಲಿಸಿದ ಪರಮ ಶಿಷ್ಯನಾಗುತಲಿ ।
ಗುರು ತೊರೆದನು ಮಾಯದ ಕಾಯವನಾ ಕ್ಷಣದಲ್ಲಿ ॥

॥ ಗುಲ್‌ವುಡನ್ ॥

ಗುರುವಿನಾ ಬಳಿಕಲಿವರ ಗಮನಾ ।
ತಿರುಗುತಾ ಊರು ಗ್ರಾಮಗಳನಾ ।
ಸೇರುತಾ ಭಕ್ತರನೇ ಕರನಾ ।
ಮೆರೆಯುವ ಬೆಂಗ್ಳೂರ್ ನಗರದೊಳಿದ್ದು ಕಳೆದರು ಕೆಲವು ದಿನಾ ॥

॥ ಶೋಕ ॥

ಹೊರಟರಾಗ ಶಂಕೆ ಇಲ್ಲದೆ ತುಮಕೂರು ಮೇಣ್ ತಿಪಟೂರಿಗೆ ।
ಕರೆದರೂ ಚಿಕ್ಕನಾಯ್ಕನಳ್ಳಿ ನಾಗೇಂದ್ರಯ್ಯ ನೆಂದಿವರಿಗೆ ॥

॥ ಚಾಲ್ ॥

ಪರಮ ಪುಣ್ಯಸ್ಥಳ ಬೆನಕನ ಕಟ್ಟೆಯ ಮಲ್ಲೇಶನ್ ಗವಿಲ್ ತಪಸಾಚಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ॥

॥ ೫ ॥

ಇಟ್ಟು ದೃಷ್ಟಿಯನು ಬೆಟ್ಟದ ಗವಿಯಲಿ ತಪವಾಚರಿಸುವ ಮನದಲ್ಲಿ ।
ನಿಟಲಾಕ್ಷನ ಪರ ಧ್ಯಾನವ ತೊಟ್ಟರು ಹದಿನೈದು ದಿನಗಳ ಕಾಲದಲಿ ॥
ಗುಟ್ಟನು ತಿಳಿದಾ ಕುಪ್ಪೂರು ಭೈರಪ್ಪ ಬಂದು ಸೇವೆಯನು ಮಾಡುತಲಿ ।
ಮುಟ್ಟಿತು ಸುದ್ದಿಯು ಊರಿನ ಜನರಿಗೆ ಗಲಭೆಯು ಹೆಚ್ಚಿತು ಗವಿಯ ಬಳಿ ॥
ನಿಷ್ಟೆನೇಮ ಮನಶ್ಯಾಂತಿಯು ಇಲ್ಲದೆ ಬಹಿರ್ಮುಖರಾದರು ಗವಿಯಲ್ಲಿ ।
ಥಟ್ಟನೆ ಜನರಿಗೆ ಆಶೀರ್ವಾದಿಸಿ ಬಿಟ್ಟರು ಕುಪ್ಪೂರು ಕ್ಷಣದಲ್ಲಿ ॥
ಇಟ್ಟರು ದೃಷ್ಟಿಯ ಬಳವನೇರಲಾ ರಂಗಾಪುರಕೆ ಬಂದಲ್ಲಿ ।
ನಾಟಿತು ಮನಕೆ ಕೋಟಲೆ ಇಲ್ಲದೆ ತಾತಯ್ಯನವರು ಶಾಂತಿಯಲಿ ॥

॥ ಚಾಲ್‌ವುಡನ್ ॥

ಶಿರಾ ಹಿರಿಯೂರು ನಾಗಯ್ಯ ಪೆಸರು ಕಳವೆ ಬಾಗಿ ಮೈಸೂರು ಸ್ವಾಮಿ ।

ಹೊರಟು ಬಂದರು ಕಂದಕೂರಿನಲಿ ನಾವು ಬಂತು ಯೋಗಪ್ಪ ಸ್ವಾಮಿ
ಭರದಿ ಮಧೂನಡಿ ಪೆಸರನು ಕೇಳಿರಿ ಲಿಂಗಾಯತ ಸಾಧು ಪ್ರೇಮಿ ।
ಕರೆಯುತ ಕಲ್ಯಾಣ ದುರ್ಗದ ಜನಗಳು ಎರ್‍ರಿತಾತ ಭಕ್ತರ ಪ್ರೇಮಿ ॥

॥ ಚಿಕ್ಕವುಡನ್ ॥

ಕಲ್ಯಾಣ ದುರ್ಗದಿ ತೋರಿ ಪವಾಡಗಳನ್ನು ।
ಬಲ್ಲಂತ ಭಕ್ತರು ಪಡೆದು ಪವಾಡವನ್ನು ॥
ಲೀಲಾ ಮಾತ್ರದಿಂದಲಿ ತೋರಿ ಪವಾಡಗಳನ್ನು ।
ಬಲು ಮಹಾತ್ಮರೆನ್ನುತ ತಿಳಿದರಾಗ ಜನರಿನ್ನು ॥

॥ ಗುಲ್‌ವುಡನ್ ॥

ಇದೊಂದೂ ಪವಾಡ ತೋರುತಲಿ ।
ಅದೊಂದು ಮಳೆ ನೀರ್ದೆಸೆಯಲ್ಲಿ ॥
ಇದುವೆ ಕಲ್ಯಾಣ ದುರ್ಗವಲ್ಲೀ ।
ಮಧುರಸ ಸವಿಯುತ ಮತಿಯೊಳು ಪೀರ್ದರು ಮಹಿಮೆ ವಿಚಾರದಲ್ಲೀ ॥

॥ ಶ್ಲೋಕ ॥

ಅಂಬುಧಿಯ ತೆರ ತುಂಬಿ ಭಕ್ತರು ಸಂಭ್ರಮಾವನು ನೋಡುತಾ ।
ಗಂಭೀರವಾದ ಡಿಂಬದರ್ಶಿತ ಮುಂದೆ ತೋರ್ದರ್ ಮಹಾತ್ಮ್ಯೆತಾ ॥

॥ ಚಾಲ್ ॥

ಪರವಶವಾಗಿರೆ ತಾತಯ್ಯನವರು ಮಳೆ ಬಂದಾಯಿತು ಅವಾಂತರಾ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯು ಸಲ್ಲಿಸುತ್ತಿರುವರು ನಿರಂತರಾ ॥

ಮಳೆದೆಶೆಯಿಂದಲಿ ಕಸಕಡ್ಡಿ ಬಂದು ಹಳ್ಳದೊಳಗೆ ಮುಚ್ಚಿರಕೊಂಡು ।
ತಿಳಿಯಲಿ ಇಲ್ಲ ತಾತನ್ ಶರೀರ ಯೋಗ ಸಿಂಹಾಸನ ಒಳಗೊಂಡು ॥
ತಲೆಯಮೇಲೆ ನಾಗರ ಹಾವುಗಳೆಡೆಗಳೆತ್ತಿ ಆಡೀಕೊಂಡು ।

ಮೆಲ್ಲನೆ ಬಂದವು ಕಾಗೆ ನಾಯಿಗಳು ಎರ್ರಿತಾತನ ಜೊತೆಗೊಂಡು ||
ಲೀಲೆಯಿಂದಲಾ ಪ್ರಾಣಿಗಳ ಸಂಗದಿ ಭೋಜನವನ್ನೂ ಕೈ ಗೊಂಡು |
ಇಳೆಯೊಳ್ ಪ್ರಾಣಿಗಳ್ ತನ್ನಂತೆಂಬುವ ಮಾನವ ಜನ್ಮದಿ ತಿಳಕೊಂಡು ||
ಬೆಲ್ಲದ ರುಚಿಯಂತೆ ತಾತನ ಪವಾಡ ಕೆಲ ಜನರಿದನೂ ತಿಳಕೊಂಡು |
ಬಲ್ಲಂತ ಭಕ್ತರು ತಾತನ ಸೇವೆಯ ಸಕ್ಕರೆಯಂತೆ ಸವಿದುಂಡು ||

|| ಚಾಲ್‌ವುಡನ್ ||

ತಾತನು ಬೆಳಗುಪ್ಪೆಗೆ ಬಂದಾಗ ದಿಗಂಬರ ಸ್ಥಿತಿಯೊಳಗಿರುತಿದ್ದು |
ಈತನ ಬೆತ್ತಲೆ ಅವಸ್ಥೆ ನೋಡಿ ಜನಗಳೆಲ್ಲ ಭಯ ಪಡುತಿದ್ದು ||
ಭೀತಿಯ ಪಡದೆ ನಿಂತ ಬಂಜೆಯ ಕುಚವ ಮುಟ್ಟಿ ಮಕ್ಕಳಾಗಿದ್ದು |
ಪ್ರತ್ಯೇಕ ಬೆಳಗುಪ್ಪೆ ಎರ್ರಿಯಸ್ವಾಮಿಯು ಜೇಕ್ಯಗುರ್ಕಿ ತಾತನಲ್ಲೆಂದು ||

|| ಚಿಕ್ಕವುಡನ್ ||

ಬೆಳಗುಪ್ಪೆಯ ಗುಡ್ಡದ ಕಲ್ಲು ಕೆಂಬದೊಳು ವಾಸ |
ತಿಳಿಯೆಣ್ಣೆ ಹೋಳಿಯಲಿ ಈಜುತ್ತ ಮನಕೇ ಹರುಷ ||
ಶಿಲಾ ಪ್ರತಿಮೆ ಬಸವಣ್ಣನ ನಡೆಸಿ ಮುಸ್ಟೂರಲಿ ಹರುಷ |
ತಿಳಿಸಿದರು ಗೌಡನಿಗೆ ಮರಣವು ಯೆಂದೀ ದಿವಸ ||

|| ಗುಲ್‌ವುಡನ್ ||

ತಾತಯ್ಯನ ಧ್ಯಾನ ಮಾಡಿದವರು |
ಮತಿವಂತೆ ವೀರಮ್ಮ ಎಂಬುವರು |
ನುತಿಸಿ ಪವಾಡವ ಪಡೆದವರು |
ಮತ್ತೆ ನಗರೇಶ್ವರ ದೇವಾಲಯದ ಪ್ಲಾನ್ ರಚಿಸುತ ಕೊಟ್ಟವರು ||

|| ಶ್ಲೋಕ ||

ಸುತ್ತ ಊರು ಅನೇಕ ತಾತನು ಮುಸ್ಟೂರಿಗೆ ಬಂದಿದ್ದರು |
ಪ್ರೀತಿಯಿಂದಲಿ ತಿಪ್ಪರೆಡ್ಡಿಯ ಮನೆಯೊಳ್ ಭೋಜನ ಗೈಯ್ಯುತ್ತಿದ್ದರು ||

॥ ಚಾಲ್ ॥

ಹಿರೇ ಮುಷ್ಟೂರು ಸಿದ್ಧೇಶ್ವರನ್ ಜಾತ್ರೆಗೆ ನಡೆಯುತ ಬಂದರು ಮನಸಾರಾ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೭ ॥

ಯಾರೋ ಯಿಲಾಲು ಬತ್ತಿಯ ಕೈಯ್ಯಲಿ ಹಿಡಿದುಕೊಂಡಿದ್ದರು ಜಾತ್ರೆಯಲಿ ।
ಸರ್ರನೆ ತಾತನ ತಲೆಗೆ ಬೆಂಕಿ ಬಿದ್ದು ಕೂದಲೆಲ್ಲ ಭಸ್ಮವಾಗುತಲಿ ॥
ಅರಿಯಲೇ ಇಲ್ಲ ತಾತಯ್ಯನಾಗ ಸುಟ್ಟಿದ ಕಂಡರು ಜನರಲ್ಲಿ ।
ಪರಿಶೆಯ ಜನಗಳು ಕೂಡಿ ನೋಡಿದರು ಎಂಥ ಮಹಾತ್ಮನೊ ಎನ್ನುತಲಿ ॥
ಈ ರೀತಿ ನಡೆದಾ ವಿಚಾರ ಕೇಳಿ ತಿಪ್ಪಾರೆಡ್ಡಿಯು ಬಂದಲ್ಲಿ ।
ತ್ವರಿತದಿ ತಲೆಯನು ಬೋಳಿಸಲಾಗ ಎಣ್ಣೆ ಹೊತ್ತಿ ಸ್ನಾನ ಗೈಸುತಲಿ ॥
ಸ್ಮರಿಸುವ ಭಕ್ತರ ಹಂಬಲ ಸಲಿಸುವ ಭಕ್ತ ಶಿಖಾಮಣಿ ಎನ್ನುತಲಿ ।
ಮಾರನೆ ದಿನವೇ ಹೊರಟರು ನಿಲ್ಲದೆ ಊರು ಗ್ರಾಮಗಳ ತಿರುಗುತಲಿ ॥

॥ ಚಾಲ್‌ವುಡನ್ ॥

ಒಂದೇ ಸಮಯದಿ ಮೂರ್ನಾಲ್ಕೂರಿನ ಜನರ ಕೂಡೆ ಮಾತಾಡುತ್ತಾ ।
ಸಂಧಿಸಿತಾಗ ಸತ್ತಿದ್ದ ಹದ್ದಿಗೆ ಎದ್ದು ಹೋಗು ಹಾರಾಡೆನುತಾ ॥
ಚಂದದಿ ಸ್ತ್ರೀಯರು ಬಂದರು ಅಲ್ಲಿಗೆ ಊರನ ಕೊಂಡೆಗೆ ಬರಬೇಕೆನುತಾ ।
ಒಂದು ಭಾವಿಯಲಿ ಧುಮುಕಿ ತಾತನು ಎರಡು ಹಾವುಗಳನೆತ್ತುತ್ತಾ ॥

॥ ಚಿಕ್ಕವುರ್ದ ॥

ಹಿಡಿದೆತ್ತಿದ ಹಾವನು ಬೇಕಾದವರು ಕೇಳಿ ಎಂದು ।
ಧಡ ಧಡನೆ ಓಡಿದಳು ಒಬ್ಬಾಕೆಯು ಭಯಬಿದ್ದು ॥
ನಡುಗದೇ ನಿಂತಿದ್ದೊಬ್ಬಾಕೆ ಐಶ್ವರ್ಯವ ಪಡೆದು ।
ಒಡನೆಯೇ ಕರಕೊಂಡು ಬಂದರು ತಾತನಿಗೆಂದು ॥

॥ ಗುಲ್‌ವುರ್ದ ॥

ನಡೇ ನುಡಿ ಹುಚ್ಚರ ತೆರನಂತೆ ।

ಹುಡುಗರು ಕಲ್ಲೇಟ್ಗೊ ಡೆದರಂತೆ ।
ಕೂಡಿ ಪುಂಡರಾ ಸಂತೆಯಂತೆ ।
ಹೊಡೆದ ಏಟುಗಳ ತಿನ್ನುತ ಸ್ವಾಮಿ ಸುಮ್ಮನಿದ್ದರಂತೆ ॥

॥ ಶ್ಲೋಕ ॥

ಉರವಕೊಂಡೆ ಬಜಾರಿನಲ್ಲಿ ತಿರುಗುತ್ತಿದ್ದಾ ತಾತನು ।
ಮೆರೆವ ಕನ್ನಿಕಾಪರಮೇಶ್ವರೀ ಬಸವಣ್ಣ ದೇಗುಲದಿದ್ದನು ॥

॥ ಚಾಲ್ ॥

ಗುರ್ರಮು ಸಂಜೀವಮ್ಮ, ಜೀಜಮ್ಮನ ಮನೆಯೊಳು ತಾತಗೆ ನಡೆಯುತ ಸತ್ಕಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೮ ॥

ಬಡವಳಾದ ಜೀಜಮ್ಮನು ಮಾಡುತ ಸಾಧು ಸತ್ಪುರುಷರ ಸೇವೆಯನು ।
ನೋಡುತೆಲ್ಲ ಸ್ವಾಮಿ ಜೀಜಮ್ಮಗ್ಹೇಳಿದರ್ ಹಿರಿಯರು ಬರುವರು ತಿಳಿ ನೀನು ॥
ಧೃಢ ಮನದಿಂದಲಿ ಭಕ್ತೆ ಶಬರಿಯಂತೆ ಕಾಯುತ ನಿಂತಳು ಮಾರ್ಗವನು ।
ಒಡನೆಯೆ ಬಂದರು ದರುಶನವಿತ್ತರು ಭಕ್ತಳಾದ ಜೀಜಮ್ಮಗಿನ್ನು ॥
ನೋಡಿದೊಡನೆಯೇ ಪರಮ ಭಕ್ತಿಯಲಿ ಕರೆದೊಯ್ದಳು ಮನೆಯೊಳು ತಾನು ।
ಜೋಡಿಸಿ ಕರಗಳ ಬೇಡುತ ನಿಂತಳು ದಯಾಮಯ ಪಾಲಿಸು ಎನ್ನನ್ನು ॥
ಮಾಡುತ ಸೇವೆಯ ಸಕಲೈಶ್ವರ್ಯವ ಪಡೆದು ಗುರುವಿನಾ ಕೃಪೆಯಿನ್ನು ।
ನೋಡುತ ಜೀಜಮ್ಮನ್ಭಾಗ್ಯವ ಭಕ್ತರು ಮಾಡುತ ತಾತನ ಸೇವೆಯನು ॥

॥ ಚಾಲ್‌ವುರ್ದ ॥

ಜೀಜಮ್ಮನ್ಮನೆಯಲಿ ಸ್ನಾನವ ಮಾಡುತ ಊಟ ನೀಡಿದರೆ ಭುಂಜಿಪುದು ।
ಭೋಜನ ನಂತರ ಗೌಡರ ಕೆರೆಯಲಿ, ಭಾವಿಯಲ್ಲಿ ಈಜಾಡುವುದು ॥
ಬಜಾರದಲ್ಲಿ ತಿರುಗಾಡಿ ಬಂದು ಹಜಾರದಲ್ಲಿ ಮಲಗುವುದು ।
ಭಜಿಸುತ ರಂಗನ ಪಾದ ಚೆಂದವೆಂದು ನಾಲ್ಕು ಸರಾಗದಿ ಹಾಡುವುದು ॥

॥ ಚಿಕ್ಕವುಡನ್ ॥

ಜೀವನ್ಮುಕ್ತಿ ಶಕ್ತಿಯು ಮಂಟಪವನ್ನೇ ರಚಿಸಿ ।
ಶಿವ ಪಂಚತಾರಕದ ಮಂತ್ರವನ್ನೆ ಉಚ್ಚರಿಸಿ ॥
ಜೀವ ಪರಮೈಕ್ಯದಾ ತತ್ವವನ್ನೇ ವಿಸ್ತರಿಸಿ ।
ಪಾವನಾ ಪ್ರಣವ ಸ್ವರೂಪ ಬಿರುದನೇ ಧರಿಸಿ ॥

॥ ಗುಲ್‌ವುಡನ್ ॥

ಗ್ರಾಮ ಊರುಗಳ ತಿರುಗಿ ಬಂದು ।
ಗ್ರಾಮ ದೇವತೆಯ ಗುಡಿಯಲಿದ್ದು ॥
ಪ್ರೇಮದಿ ಮಂಡಾಳ್ ಕಡಲೆ ತಿಂದೂ ।
ನೇಮದಿ ಊಟವ ತಂದಿದ್ದನುಂಡು ಮೌನವ ಧರಿಸಿದ್ದೂ ॥

॥ ಶ್ಲೋಕ ॥

ದಾರಿ ತಪ್ಪಿ ನಡೆದ ಜನರಿಗೆ ಭಕ್ತಿಮಾರ್ಗಕ್ಕೆಳೆವರು ।
ಬರುವ ಕಳೆದ ಯುಗಗಳಲ್ಲಿ ಲೀಲೆಯನ್ನೇ ತೋರ್ದರು ॥

॥ ಚಾಲ್ ॥

ಗುರುವಿನ ಗುರಿಯನು ತಿಳಿಯದೆ ಜನಗಳು ಪಡುತಲಿದ್ದರತಿ ಅಹಂಕಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

ನೋಡುತಲೊಬ್ಬ ಮುಸಲ್ಮಾನನು ತಾತ ಭಾವಿಲೀಜುತ್ತಿರಲದನು ।
ಕಡು ಕೋಪದೊಳು ತಾತನ ಮೇಲೆ ಲಂಘಿಸಿ ಭಾವಿಗೆ ಹಾರಿದನು ॥
ಹುಡುಕುತ ನೀರೊಳು ಸಿಕ್ಕದೆ ತಾತನು ಆಳವಾಗಿ ಹೋಗಿರಲಿನ್ನು ।
ಒಡನೆಯೆ ದಡದ ಮೇಲ್ಗಡೆ ಬಂದು ಮುಸಲ್ಮಾನ ಬೆರಗಾಗಿದ್ದನು ॥
ನಡೆಯುತ ಊರೊಳು ಬರುತ್ತಿರುವಾಗ ದೇವಾಲಯದಿ ಕಂಡ ತಾತನನು ।
ಸಡಗರದೊಳಗೆ ಬಸವಣ್ಣನಿಗೆ ಧರಿಸುತ ನಿಂತಿಪ್ಪ ಪತ್ರೆಯನ್ನು ॥

ನೋಡಿದೊಡನೆಯೆ ಮುಸಲ್ಮಾನನಿಗೆ ದಡ, ದಡ ನಡುಗಿತು ಎದೆಲಿನ್ನು ।
ಮಾಡಿದೆ ದ್ರೋಹವ ಮಹಿಮನಿಗೆನ್ನುತ ಮುಸಲ್ಮಾನ ತಾ ಕೊರಗಿದನು ॥

॥ ಚಾಲ್ ವುಡನ್ ॥

ಊರಿಗೆ ಬಂದು ಜಂಬುನಾಥ ಬಸವಣ್ಣ ದೇಗುಲದಿ ಇರುತಿದ್ದರು ।
ದರೋಡೆಕಾರರು ಕಳುವಿಗೆ ಈ ದಿನ ಒಳ್ಳೆದಲ್ಲವೆಂದು ಕೇಳಿದರು ॥
ಮುರಿಯದ ಮೌನವ ಕಂಡು ಕಳ್ಳರು ತಲೆಗೆ ತೆಂಗಿನ್ಕಾಯಿ ಕುಕ್ಕಿದರು ।
ಭರದಿ ಕಳ್ಳರಿಗೆ ತಲೆಗೆ ಏಟುಬಿದ್ದು ಬಹಳವಾಗಿಯೇ ನರಳಿದರು ॥

॥ ಚಿಕ್ಕವುಡನ್ ॥

ಮಾಡಿದ ದ್ರೋಹವ ಲಕ್ಷಿಸದೇ ಊರೊಳಗೆ ।
ಮಾಡಿದರು ಕಳುವನು ರಂಗಯ್ಯನ ಮನೆಯೊಳಗೆ ॥
ಒಡನೆಯೇ ಸಿಕ್ಕಿಹೋದರು ಪೋಲೀಸರ ಕೈಯೊಳಗೆ ।
ತಡವಿಲ್ಲದೆ ಶಿಕ್ಷೆಯ ಪಡೆದರು ಸೆರೆಮನೆಯೊಳಗೆ ॥

॥ ಗುಲ್‌ವುಡನ್ ॥

ಅಪಾರ ಕಷ್ಟವ ಪಡೆಯುತಲಿ ।
ಉಪಾಯವಿಲ್ಲದೆ ವ್ಯಸನದಲಿ ॥
ಪಾಪದ ಕೂಪದಿ ಮುಳುಗುತಲಿ ।
ತಾಪಸವರ್ಯನ ತಪವನು ಕೆಡಿಸುವ ವಂಚನೆ ವಿಷಯದಲಿ ॥

॥ ಶ್ಲೋಕ ॥

ಯೋಗಿವರ್ಯ ಭವರೋಗ ತೊರೆದು ನಿರ್ಮಲಾನಂದದಿ ಇದ್ದರು ।
ನೀಗಿ ಮಹಿಮೆಯ ಜಗದ ಮೂರ್ಖರು ಯೋಗವನ್ನೆ ಮರೆತರು ॥

॥ ಚಾಲ್ ॥

ಅರಿಯುತ ಜನನ ಮರಣರಹಸ್ಯವ ಎರ್ರಿತಾತಯ್ಯನು ಕೃಪಾಕರಾ ।
ಪರಿಪೂರ್ಣತೆಯಲಿ ಭಕ್ತರ ಬದುಕೆಯ ಸಲ್ಲಿಸುತ್ತಿರುವರು ನಿರಂತರಾ ॥

|| ೧೦ ||

ಕೆಲವು ಸಮಯದೊಳು ಭಾವಿಗೆ ಪೋಗಿ ಎರಡು ಮೂರು ದಿನ ಈಜುತ್ತ |
ಕ್ಷುಲ್ಲಕ ಜನಗಳು ಸಹಿಸದೆ ಇದನು ತೊಂದರೆಯನ್ನು ಮಾಡುತ್ತಾ ||
ಕಲ್ಲು ಚೂರಿನೊಳು ತಾತನ ತಲೆಗೆ ಬಿರ್ ಬಿರ ನೇಟುಗಳೊಡೆಯುತ್ತಾ
ತಿಳಿಯದೆ ತಾತನ ಮಹಿಮಾಂತನನು ತತ್ತ್ವಜ್ಞಾನವನು ಮರೆಯುತ್ತಾ ||
ಬಲ್ಲವರಾದರು-ಕೆಲಜನ ಭಕ್ತರು ತಾತನ ಧ್ಯಾನವ ಮಾಡುತ್ತಾ |
ಚಲಿಸುತ ಮನವನು ಮಹಾತ್ಮರೊಂದಿಗೆ ಪೂರ್ಣಾನಂದವ ಪಡೆಯುತ್ತಾ ||
ಬಾಲ ಲೀಲೆಯೆಂದು ಎರ್ರಿತಾತಯ್ಯ ತೊಂದರೆಯೆಲ್ಲವ ಸಹಿಸುತ್ತಾ |
ಕೆಲವು ಕಾಲವು ಕಳೆದ ಅನಂತರ ದುರ್ಜನರೆಲ್ಲ ಶರಣಾಗುತ್ತಾ ||

|| ಚಾಲ್ ವುಡನ್ ||

ಉರವಕೊಂಡೆಯಲಿ ತೋರಿ ಪವಾಡನ ಬುದಗವಿಯಿಂ ತಾತನು ಬಂದು
ಸೇರುತ ಕಟುಕರನೇಕರು ತಾತಗೆ ಮದ್ಯಪಾನವನು ಮಾಡೆಂದು |
ಮೀರಿದ ಕೋಪವು ತಾತಗೆ ಬಂದು ನಿವ್ವಂಶ ಅಳಿಯಲಿ ಎನುತೆಂದು |
ಹೊರಟರು ಕಟುಕರಿಗ್ಯಾಪವ ಕೊಟ್ಟು ತಾತಯ್ಯ ಯಲಗೊಂಡೆಗೆ ಬಂದು |

|| ಚಿಕ್ಕವುಡನ್ ||

ಒಬ್ಬ ಭಕ್ತನಿಗಾಗಿ ಹುತ್ತದಿ ಹಾವುಗಳ್ತೆಗೆದು |
ಶುಭ ದೇವರ ಜಗುಲಿಯ ಮೇಲಿಟ್ಟು ಪೂಜಿಸು ಎಂದು |
ಗೊಬ್ಬು ಆಟ ವಿನೋದದಿ ಹಾವು ಬಂಗಾರವಾಗಿದ್ದು |
ಉಬ್ಬಿದನು ಭಕ್ತನು ಇಂಥ ಪವಾಡವ ತಿಳಿದು ||

|| ಗುಲ್ ವುಡನ್ ||

ನರಕಮಯ ಶರೀರ ವಿರುತಿದ್ದು |
ಹಿರಿಯರಮಧ್ಯದಿ ಕುಳಿತಿದ್ದು ||
ಭರದಿ ತಳವಾರನ ಕರೆಸಿದ್ದು |
ಊರಿನ ಆಚೆಗೆ ಹಳ್ಳದ ಕಡೆಗೆ ತಳ್ಳು ಎನ್ನುತೆಂದೂ ||

॥ ಶ್ಲೋಕ ॥

ತಾತನಾಗಲಿ ದಾಸರಯ್ಯನ ಹೊಲದಿ ಬಂದ್ಕುಳಿತಿದ್ದರು ।
ಹೊತ್ತು ಮುಳುಗಿ ಕತ್ತಲಾದರೂ ಕುಳಿತ ಕಡೆಕುಳಿತಿದ್ದರು ॥

॥ ಚಾಲ್ ॥

ಸೇರುತ ಹಂಪಣ್ಣ ಗೌಡ ದೊಡ್ಡಪ್ಪ ಬಸವ ಲಿಂಗಪ್ಪನು ಸತ್ಕಾರ ।
ಪರಿ ಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೧೧ ॥

ವಿಚಾರ ತಿಳಿದ್ಮೇಲೂರಿಗೆ ಕರೆಯಲು ಗಟ್ಟು ಮಲ್ಲೇಶಪ್ಪ ಮೊದಲಾಗಿ ।
ಯೋಚಿಸಿ ಬರುಗಂಟ್ಲು ಮಲ್ಲೇಶಪ್ಪನು ತಾತನಿದ್ದ ಸ್ಥಳದೊಳು ಪೋಗಿ ॥
ಹುಚ್ಚನೆಂದು ನಾವರಿತುಕೊಂಡಿದ್ದೆವು ಹುಚ್ಚನಲ್ಲ ನೀ ಶಿವಯೋಗಿ ।
ಹುಚ್ಚರ ಹುಚ್ಚನು ಸ್ವೇಚ್ಛೆಲಿ ಹರಿಸುವ ಸಚ್ಚಿದಾನಂದನು ನೀನಾಗಿ ॥
ಬಚ್ಚಲ ಹುಳುವಂತೆ ಇಚ್ಛೆಲಿ ಬರುವ ಕಾಮಾಂಧಕಾರವು ನಮದಾಗಿ ।
ಇಚ್ಛೆ ಪೂರೈಸುವ ಅತಿಥಿಗಳ್ ನೀವು ಭಾವಿ ನೀರು ಕುಡಿಯಿರಿ ಪೋಗಿ ॥
ಪಾಚಿಯು ಕಟ್ಟಿದ್ದ ಭಾವಿಯ ನೀರನು ಕಂಡರು ಎಲ್ಲರು ಬೆಪ್ಪಾಗಿ ।
ಪಾಚಿ ನೀರನು ಕರದೊಳು ಕುಡಿಯಲಮೃತ ಮಯದಂತಿರಲಾಗಿ ॥

॥ ಚಾಲ್‌ವುಡನ್ ॥

ಉದಿಸುವ ಧರೆಯಲಿ ಇಂಥ ಮಹಾತ್ಮರು ಭಕ್ತ ಬಂಧುಗಳಿಗಪರೂಪ ।
ಬೋಧಿಸಿ ಭಕ್ತರಿಗೆ ಸಾಧಕ ತಿಳಿಸುವ ಯೋಗಷ್ಟಾಂಗದ ನಿಜರೂಪ ॥
ಸಾಧುಗಳಾಗಿ ಸಾಧಿಸಿ ಜಗದಲಿ ಮೂಲ ಮಂತ್ರಗಳ ಒಳರೂಪ ।
ಚಿದ್ಘನ ಪ್ರಭೆಯನು ಸಾದಿಷ್ಠಾನದಿ ಚಿನುಮಯ ಬ್ರಂಹ್ಮವು ತನುರೂಪ ॥

॥ ಚಿಕ್ಕವುಡನ್ ॥

ಯಾರೊ ನೋಡೋಣವೆಂದು ಬಂದರು ತಿಪ್ಪೆಯ ಕಡೆಗೆ ।
ಎದ್ರಿತಾತನ ಕಂಡು ಬಾ ಎನ್ನುತ ಊರಿಗೆ ॥

ತಿರುಗಿ ಮಾತನಾಡದೆ ಮೌನಧರಿಸಿ ಆವಾಗೆ ।
ಪರಿ ಪರಿಯಿಂದಲ್ವಿಚಾರಿಸಲಾಗ ತಾತನಿಗೆ ॥

॥ ಗುಲ್‌ವುಡನ್ ॥

ಏನಪ್ಪಾ ನಿಮ್ಮದು ಯಾವೂರು ।
ಏನಪ್ಪ ಹೆಸರೇನ್ ಕರೆಯುವರು ॥
ಏನಪ್ಪ ಎಲ್ಲಿಂದ ಬಂದವರೂ ।
ಏನಪ್ಪ ಇಲ್ಲಿ ಕುಳಿತು ಕೊಂಡಿರುವಿರಿ ಎನ್ನುತ ಕೇಳಿದರು ॥

॥ ಶ್ಲೋಕ ॥

ಒದಗಿ ಬಂದಿತು ಸಾವಿರ್‌ದೆಂಟ್ನೂರ್ ತೊಂಭತ್ತೇಳನೆ ಇಸವಿ ತಾ ।
ಇದ್ದ ಯೋಗವು ಹೇವಿಳಂಬಿವರುಷವೂ ಶುಭವೆನ್ನುತಾ ॥

॥ ಚಾಲ್ ॥

ಮೀರಿದ ಶಿವಕಲಾ ಸಂಪನ್ನನಾಗಿ ಯೋಗಾಭ್ಯಾಸದ ಜಡೆಯಧರಾ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೧೨ ॥

ಚೇಳ್ಳಗುರ್ಕಿ ಜನ ಎಲ್ರಿತಾತನ ಭಯ ಭಕ್ತಿಯಲಿ ನಮಿಸುತ್ತಾ ।
ಎಲ್ಲ ಜನಗಳು ಸೇರಿ ಎತ್ತಿಕೊಂಡು ಕರಗಳೆಲ್ಲವನು ಮುಗಿಯುತ್ತಾ ॥
ಒಳ್ಳೆ ಬಿಸಿಲುಕಾಲ ಮಠ ಮುಂದಿರುವ ಬೇವಿನ ಮರದಡಿ ಕುಳಿಸುತ್ತಾ ।
ಕೆಲದಿನ ವಿದ್ದರು ಈಶ್ವರ ಗುಡಿಯೊಳು ಸ್ಮಶಾನಕ್ಕೆ ತಿರುಗಾಡುತ್ತಾ ॥
ಕಾಲರ ರೋಗವು ಕಾಲಿಟ್ಟ ಮೇಲೆ ಕಲ್ಲನು ಮನೆಗಳಿಗೆಸೆಯುತ್ತಾ ।
ಕಲ್ಲು ಕರದೊಳೆತ್ತಿ ಬೇಡ ಬೇಡೆನ್ನಲು ಯಾರ ಮನೆಲ್ಲಾಯದೆ ಇರುತಾ ॥
ಕಲ್ಲು ಗಳೆಸೆದ ಮನೆಗಳಲ್ಲಿಯೇ ಒಬ್ಬರೊ ಇಬ್ಬರೊ ಸಾಯುತ್ತಾ ।
ಕೊಳಗಲ್ಲು ವೀರಮ್ಮನಮ್ಮನ ಮನೆಯಲಿ ಇಬ್ಬರು ಕಾಲರ ರೋಗದಿ ನರಳುತ್ತಾ ॥

॥ ಚಾಲ್‌ವುಡನ್ ॥

ಮುಂದೇನು ಗತಿಯೋ ಎನ್ನುತ ವೀರಮ್ಮ ತಾತನ ಬಳಿಯೊಳು ಬಂದಳಲ್ಲಾ ।
ಸಂದೇಹವಿಲ್ಲದೆ ಕುಚಗಳ ಹಿಡಿದು ನೆಲಕ್ಕಾಗ ಕುಕ್ಕಿದರಲ್ಲಾ ॥
ಕುಂದದೆ ನಡೆ ನೀ ಎಂದು ಪೇಳಲು ಮನೆಗೆ ಬಂದು ನೋಡಿದಳಲ್ಲಾ ।
ಚೆಂದದಿ ಇಬ್ಬರು ಕ್ಷೇಮದಿ ಇದ್ದರು ನೋಡಿ ಹರುಷ ಪಡುತಾಗೆಲ್ಲಾ ॥

॥ ಚಿಕ್ಕವುದನ್ ॥

ಜನ ಸತ್ತುದ ಕಂಡು ಕುಮಾರಯ್ಯ ಭಯಬಿದ್ದು ।
ವಿನಯದಿ ಕೇಳಿದ ತಾತನ ಬಳಿಯೊಳು ಬಂದು ।
ಇನ್ನಿರದು ಕಾಲರ ನಾಳೆಗೆ ನಿಲ್ಲುವುದೆಂದು ।
ಕೋಣನಾ ಕಿವಿ ಹಿಡಿದು ಗೌಡರ ಮನೆ ಬಳಿತಂದು ॥

॥ ಗುಲ್‌ವುರ್ದ ॥

ಕೋಣನಾ ಪೂಜೆ ಮಾಡಿರೆಲ್ಲಾ ।
ಕೋಣನು ಹೊರಟು ಹೋಯಿತಲ್ಲಾ ॥
ಬೇನೆ ಅದು ನಿಂತಿತು ಸುಳ್ಳಲ್ಲಾ ।
ನೀನು ನಿಮ್ಮಪರ ಕರೆದೊಯ್ ಎನುತ ತಾತ ಪೇಳ್ದರಲ್ಲಾ ॥

॥ ಶ್ಲೋಕ ॥

ಸೊಗಸಿನಿಂದಲಿ ಯೋಗ ಪುರುಷನ ಭೀಮಣ್ಣ ಕರೆದು ತಂದನು ।
ಶೀಘ್ರದೊಳು ಸಾರಾಯಿ ಸೀಸೆಯ ತಂದು ಕುಡಿಯೆನುತಿದ್ದನು ॥

॥ ಚಾಲ್ ॥

ಕರಿಬಸವಯ್ಯನು ಬೈದು ಭೀಮಣ್ಣಗೆ ತಾತಯ್ಯನವರಿಗೆ ಮುಗಿದು ಕರಾ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೧೩ ॥

ಎಪ್ರಿತಾತನಿಗೆ ಮಠವನು ಕಟ್ಟುವ ಮಹಾಕಾಂಕ್ಷೆ ತಿಕ್ಕಯ್ಯನಿಗೆ ।

ಶರಣ ಬಳ್ಗನೂರು ಮರೀಸ್ವಾಮಿಗಳು ಕಲ್ಲಾಟವಾಡಿದ ಸ್ಥಳದೊಳಗೆ ||
ಪುರ ಶ್ರೀಮಂತರು ಗ್ರಾಮದ ಭಕ್ತರು ಹಣ ಸಂಗ್ರಹಿಸಿ ಊರೊಳಗೆ |
ಪ್ರಾರಂಭಗೈದರು  ಗುದ್ದಲಿ ಪೂಜೆಯ ತಳಹದಿ ಹಾಕಿಸಿ ಬಲವಾಗೆ ||
ಇರುವೆಯು ಕೂಡಿದ ತೆರದೊಳು ಭಕ್ತರು ಹಣ ಸಂಗ್ರಹಿಸಿ ಪ್ರಿಯದೊಳಗೆ |
ಪರಮ ಹರುಷದೊಳು ತಿಕ್ಕಯ್ಯ ಮೊದಲಾಗೆಲ್ಲರು ಸೇರುತ ಜೊತೆಯೊಳಗೆ ||
ಪರಿಪೂರ್ಣತೆಯಲಿ ಮಠದ ಕಟ್ಟಡ ಪೂರ್ಣವಾಯಿತು ಭರದೊಳಗೆ |
ಸೇರುತ ಭಕ್ತರು ನೆಲೆಸಲು ತಾತನ ಕರೆಯಲು ಹೊರಟರು ಪ್ರಿಯದೊಳಗೆ ||

|| ಚಾಲ್ ವುಡನ್ ||

ಮಠದೊಳು ಮಂಡಿಸಿ ತಾತನ ಕರೆಯಲು ಅನೇಕ ಭಕ್ತರು ಕೂಡಿರುತಾ |
ಇಷ್ಟವು ಇಲ್ಲದೆ ಸಿದ್ಧಲಿಂಗಪ್ಪನು ಕೆಟ್ಟಾಲೋಚನೆ ಮಾಡುತ್ತಾ ||
ದುಷ್ಟ ಬುದ್ಧಿಯಿಂದ ತಿಕ್ಕಯ್ಯಗ್ಹೇಳಿದ ತಾತನು ಮಠಕೆ ಬೇಡೆನುತಾ |
ಕಟ್ಟಿ ಪಾರ್ಟಿಯನು ಊರಿನ ಜನರಲಿ ಪೋಲೀಸಿಗೆ ದೂರನು ಕೊಡುತಾ ||

|| ಚಿಕ್ಕವುರ್ದ ||

ಇಷ್ಟಲ್ಲದೆ ಕೋರ್ಟಿಗರ್ಜಿಯನ್ನು ಬರಕೊಂಡು |
ಇಟ್ಟು ತಿಕ್ಕಯ್ಯನ್ವಿಚಾರದಿ ದ್ವೇಷವನ್ನು ಒಳಗೊಂಡು ||
ಮಠ ದೂರವಾಗುವುದು ಎಂದು ಜನರಿಗ್ಹೇಳಿಕೊಂಡು |
ಥಟ್ಟನೆ ಊರಿನೊಳು ವಿಷದ ಬೀಜ ಬಿತ್ತಿಕೊಂಡು ||

|| ಗುಲ್ ವುಡನ್ ||

ಎರಡು ಪಾರ್ಟಿಗೆ ತಂಟೆ ಬಿದ್ದು |
ಪರಮ ಭಕ್ತ ತಿಕ್ಕಯ್ಯನ್ನನ ನೊಂದು ||
ಎತ್ತಿ ತಾತನಿಗೆ ಕಟ್ಟದೆಯೆಂದೂ |
ತ್ವರಿತದಿ ಪಾರ್ಟಿಗಳಾದುದ ಕಂಡು ತಾತನ ಬಳಿ ಬಂದು ||

|| ಶ್ಲೋಕ ||

ಇಂಥ ಕ್ರಾಂತಿಯ ನೋಡಿ ತಿಕ್ಕಯ್ಯ ತಾತನ್ಬಳಿಗೆ ಪೋಗಲು |
ಚಿಂತೆ ಬಿಡು ತಿಕ್ಕಯ್ಯ ನೀನು ರಿಜರ್ವೆ ಬರುವುದು ಎನ್ನಲು ||

|| ಚಾಲ್ ||

ಎರಡು ಪಾರ್ಟಿಗಳ ಅರ್ಜಿ ಕೈಗೊಂಡು ರಿಜರ್ವೆ ಇತ್ತು ಊರೊಳುಪಾರ
ಪರಿಪೂರ್ಣತೆಯಲಿ ಭಕ್ತರ ಬಯಕೆಯು ಸಲ್ಲಿಸುತ್ತಿರುವರು ನಿರಂತರಾ ||

|| ೧೪ ||

ಕರೆಸುತ ಎರಡು ಪಾರ್ಟಿಗಳನ್ನು ಬರೆಸಿ ಮುಚ್ಚಳಿಕೆ ಕ್ರಮದಿಂದ |
ಯಾರೊಬ್ಬರಾಗಲಿ ಗಲಾಟೆ ಮಾಡದೆ ಸುಮ್ಮನಿದ್ದರದು ಬಲು ಚೆಂದ ||
ಎರ್ರಿತಾತನ ಇಷ್ಟವು ತಿಳಿದು ತೀರ್ಮಾನಕೊಡುವೆವು ಭರದಿಂದ |
ಈ ರೀತಿಯ ಕಟ್ಟಪ್ಪಣೆಮಾಡುತ ಅಧಿಕಾರಿ ಬಂದರು ಕ್ರಮದಿಂದ ||
ಊರಿನ ಸುತ್ತಲು ಗಲಭೆಯಾಗದಂತೆ ಕಾವಲು ಇರಿಸುತ ಬಲದಿಂದ |
ಎರ್ರಿತಾತನಿಹ ಈಶ್ವರಗುಡಿ ಬಳಿ ಬಂದರು ಅಧಿಕಾರಿ ಕ್ರಮದಿಂದ ||
ಕರಗಳ ಜೋಡಿಸಿ ಎರ್ರಿತಾತನಿಗೆ ಕೇಳಲಭೀಷ್ಟವ ನಲವಿಂದ |
ಹರುಷದಿ ಎರ್ರಿತಾತ ಪೇಳಿದರು ಪೋಗೋಣ ನಡೆಯಿರಿ ಇಲ್ಲಿಂದ ||

|| ಚಾಲ್‌ವುಡನ್ ||

ತಾತನು ಪೇಳಿದ ಮಾತಿನ ತೆರದೊಳು ಎರಡು ಪಾರ್ಟಿಕೇಳಿದರಾಗ |
ಖ್ಯಾತಿಲಿ ತಿಕ್ಕಯ್ಯನ ಪಾರ್ಟಿಜನ ಬಂದು ಉತ್ಸವ ನಡೆಸುತ ಬರಲಾಗ ||
ಜೊತೆಲಿ ರಿಜರ್ವೆ ಪಹರೆಯಿತ್ತು ಘನ ಛತ್ರಿ ಚಾಮರವ ಕೊಂಡಾಗ |
ಸುತ್ತಲು ಭಕ್ತರು ಭೇರಿಭಾಂಕರವ ಎತ್ತಿ ಮಂಗಳಾರ್ತಿಯನಾಗ ||

|| ಚಿಕ್ಕವುಡನ್ ||

ಹೊರಟು ಬರುತಲಿ ಮಠಕೆ ಭಕ್ತರೆಲ್ಲ ಒಳಗೊಂಡು |
ಹರುಷದಿ ಧೂಪ ದೀಪಾರ್ತಿಗಳನು ಬೆಳಕ್ಕೊಂಡು ||
ಪರಿ ಪರಿ ಸುಮಂಗಳ ವಾದ್ಯದೊಡನೆ ಕರಕೊಂಡು |
ಭರದಿ ಉತ್ಸವ ಮಾಡುತ ತಾತನನ್ನು ಜೊತೆಗೊಂಡು ||

|| ಗುಲ್‌ವುಡನ್ ||

ಮಠಕೆ ತಾತಯ್ಯ ಬಂದ ವೇಳೆ |
ಕುಟಿಲತನ ಸಿದ್ಲಿಂಗಪ್ಪನಲ್ಲೇ ||

ಹೊಟ್ಟೆಯಲಿ ಬಿದ್ದು ಬೆಂಕಿ ಶೂಲಿ ।
ವಟ್ಟ ಮಾಡಲಾ ತಿಕ್ಕಯ್ಯನನ್ನು ಮಾಡಿ ಕುತಂತ್ರಗಳೀ ॥

॥ ಶ್ಲೋಕ ॥

ಗುರುವ ಸೇವೆಯು ಮಾಡುತಲಿ ತಿಕ್ಕಯ್ಯ ಮಠದಿರುತಿದ್ದರು ।
ಅರಿತು ವಿಮಲ ಜ್ಞಾನದೊಳು ತಿಕ್ಕಯ್ಯಗ್ಹೊರಗೋಗೆಂದರು ॥

॥ ಚಾಲ್ ॥

ಶರಣ ತಿಕ್ಕಯ್ಯನ ಕೋಲೆಯನು ತಪ್ಪಿಸಿ ಮಾಡಲು ಭಕ್ತನ ಉದ್ಧಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯು ಸಲ್ಲಿಸುತಿರುವರು ನಿರಂತರಾ ॥

॥ ೧೫ ॥

ಗುರುವಿನ ವಾಕ್ಯವ ಕೇಳುತ ತಿಕ್ಕಯ್ಯ ಹೊರಟನಾಗ ಮಠವನು ಬಿಟ್ಟು ।
ಎರ್ರಿತಾತನಿಗೆ ಪೂಜಿಸುತ್ತಿದ್ದರು ಸಕಲ ಭಕ್ತ ಜನ ಮನಸಿಟ್ಟು ॥
ಪಾರು ಪತ್ತೇಗಾರ ಸಿದ್ಧಲಿಂಗಪ್ಪನು ಪಾದ ಪೂಜೆಗೆ ಮನಕೊಟ್ಟು ।
ಪರಮ ಪಾತಕದ ತನವನು ಮಾಡಿದ ಗುರುವರನಡಿಗಳ ಭಯಬಿಟ್ಟು ॥
ಮರುದಿನ ತಾತಗೆ ಸ್ನಾನ ಮಾಡಿಸುತ ಹೊಟ್ಟೆ ಬೊಜ್ಜು ಎಂದ ಕೈಯ್ಯಿಟ್ಟು ।
ಅರಿತು ಈ ಮಾತನು ತಾತನು ಪೇಳಿದ ಗರ್ವವು ಬಂದಿದೆ ನಿನಗೆಷ್ಟು ॥
ಮರಿಯಬೇಡವೋ ಸೂಳೆಯು ಮಗನೆ ಕಾಲಿಗ್ಬೀಳ್ವದು ಗೋಲಿಯ ಏಟು ।
ಹೊರಟು ಬಂದರು ಬಳ್ಳಾರಿಯಿಂದಲಿ ರೆವಿನ್ಯೂ ಅಧಿಕಾರಿ ಮನವಿಟ್ಟು ॥

॥ ಚಾಲ್‌ವುಡನ್ ॥

ಬಂದಂಥ ಅಧಿಕಾರಿ ಬಂದೂಕು ಕೈಲಿತ್ತು ಚಂದದಿ ಮಠದೊಳು ಕುಳಿತಿದ್ದು ।
ಒಂದು ಮೂಲೆಯೊಳು ಬಂದೂಕನಿಟ್ಟು ಗುರುವಿನ ಧ್ಯಾನದೊಳಿರುತಿದ್ದು ॥
ಸಂದಿತು ಕಾಲವು ಒದಗುತ ಬಂದಿತು ಗುರುವಿನ ವಾಕ್ಯವು ಬಿಡದಂದು ।
ಚಂದದಿ ಭಕ್ತರ ಮಧ್ಯೆ ಓಡಾಡುತ ಸಿದ್ಧಲಿಂಗಪ್ಪನು ಇರುತಿದ್ದು ॥

## ॥ ಚಿಕ್ಕವುಡನ್ ॥

ಇಟ್ಟಿದ್ದ ಬಂದೂಕು ಕೆಳಗೆ ಬಿದ್ದು ಬಾರಾಗಿ ।
ಥಟ್ಟನೆ ಗೋಲಿ ಹಾರಿ ಕಾಲಿಗ್ಬಿತ್ತು ಬಲವಾಗಿ ॥
ಕೆಟ್ಟಮದವನು ತೊಟ್ಟು ಸಿದ್ಧಲಿಂಗಪ್ಪನು ಮರುಗಿ ।
ಕಷ್ಟ ಒದಗಿ ಬಂದಿತು ಪಾಪರಾಶಿ ಬಲವಾಗಿ ॥

## ॥ ಗುಲ್‌ವುಡನ್ ॥

ಗುರುವಿನ ಭಕ್ತಿ ಇರದೆ ಇದ್ದೂ ।
ಮರವೆಯಲಿ ಮುಳುಗಿ ಎದ್ದು ಬಿದ್ದು ॥
ಅರುವಿನ ಸುಜ್ಞಾನ ಕಡೆಗೊದ್ದೂ ।
ಪರಮ ಪುರುಷನ ಪೂರ್ಣಪ್ರಭಾವವ ತಿಳಿಯದೆ ಜರೆದದ್ದು ॥

## ॥ ಶ್ಲೋಕ ॥

ಶಕ್ತರಾಗಿ ಎಗ್ರಿತಾತ ಭಕ್ತರಿಗೆ ವರ ನೀಡುತಾ ।
ಮುಕ್ತಿ ಮಾರ್ಗವ ಸೂಕ್ತ ತೋರಿಸಿ ಭಕ್ತರನು ಜಯಗೊಳಿಸುತಾ ॥

## ॥ ಚಾಲ್ ॥

ಮೇರುಗಿರಿಯ ತೆರ ತಾತಯ್ಯನವರ ಪವಾಡ ಅದ್ಭುತ ವಿಸ್ತಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

## ॥ ೧೬ ॥

ಸಿದ್ಧಿಯ ಪುರುಷನು ಇದ್ದನು ಮಠದಲಿ ಧರ್ಮೋದ್ಧಾರಕ ಎಗ್ರಿತಾತ ।
ಸದೇಹ ಮುಕ್ತಿಯ ವಿದೇಹ ಪಡಿಸಿದ ಸದ್ಧರ್ಮವೆಸಗಿದ ಅನವರತಾ ॥
ಆದಿತ್ಯ ಪುರಾಣ, ಪ್ರಮಾಣ ವಾಖ್ಯೆಯ ಜೀವ ಸಮಾಧಿಯ ಸಿದ್ಧಾಂತ
ಮೋದ ಶಿಖಾಮಣಿ ನಾದ ಬ್ರಹ್ಮಮಣಿ ಸಾಧು ಸಜ್ಜನರ ಸಂಪ್ರೀತ ॥
ಸಿದ್ಧಪುರುಷ ಬಸವಣ್ಣ ತಾ ನುಡಿದರು ಮರಣ ಮಹಾನವಮಿ ಎಂದೆನುತಾ ।
ಇದೇ ನವಮಿಯು ವಿಜಯ ಧಶಮಿಯಾಗಿ ನವರಾತ್ರಿಯನ್ನಾಚರಿಸುತ್ತಾ ॥

ಇದ್ದಿತು ಇಸವಿಯು ಸಾವಿರ್ದಿಂಟನೂರು ನಲವತ್ತೇಳದು ನಿಜವಿರುತಾ ।
ಇದೇ ದುಂದುಭಿ ನಾಮ ಸಂವತ್ಸರ ಜ್ಯೇಷ್ಠ ಶುದ್ಧ ಚೌತಿ ಎನುತಾ ॥

॥ ಚಾಲ್‌ವುರ್ಡ ॥

ತಾತನು ಜೀವ ಸಮಾಧಿಯ ಪೊಂದಲು ಸರ್ವಸುಲಕ್ಷಣ ಕೂಡಿರುತಾ ।
ಮತ್ತಿಲೆ ಮಂಗಳಸ್ನಾನವ ಮಾಡಿಸಿ ರುದ್ರಾಕ್ಷಿಭಸ್ಮವ ಧರಿಸಿರುತಾ ॥
ಸ್ತುತ್ಯವ ಮಾಡುತ ದೇಶದ ಭಕ್ತರು ಎತ್ತಿ ಕರಗಳನು ಮುಗಿಯುತ್ತಾ ।
ಈತನೆ ಓಂಕಾರಾದಿ ಸ್ವರೂಪನು ಮಾಯಕಾಯವನು ಜೈಸಿರುತಾ ॥

॥ ಚಿಕ್ಕವುಡನ್ ॥

ನಂದಿ ಧ್ವಜಗಳ ಕುಣಿತವು ಝಣ, ಝಣ ಶಬ್ದಗಳಿಂದ ।
ಗಂಧಲೇಪನ ಪುಷ್ಪಾಹಾರ ಧರಿಸಿ ಸೊಗಸಿಂದ ॥
ಬಂದಿದ್ದ ಭಕ್ತರು ಕುಣಿಯುತಾಗ ನಲವಿಂದ ।
ಚಂದದಿ ನಮಃ ಶಿವಾಯ ಎಂಬ ಘೋಷದಿಂದ ॥

॥ ಗುಲ್‌ವುಡನ್ ॥

ಎರ್ರಿತಾತ ಜೀವ ಸಮಾಧಿಯಲಿ ।
ಹರನಿಗಿತ್ತ ವಚನದ ರೀತಿಯಲಿ ॥
ಸ್ಮರಿಸುವ ಭಕ್ತರ ಮನದಲ್ಲಿ ।
ಪರಮ ಪಾವನನು ಭಕ್ತರ ಪ್ರೀತನು ದರುಶನ ತೋರುತಲಿ ॥

॥ ಶ್ಲೋಕ ॥

ನುಡಿದ ತೆರದೊಳು ನಡೆದು ತಾತಯ್ಯ ಭಕ್ತರಿಗೆ ಒಲಿದಿದ್ದರು ।
ಪಡೆದು ದರುಶನ ವರ ಸಮಾಧಿಲಿ ಹರುಷದಿಂದಿರುತಿದ್ದರು ॥

॥ ಚಾಲ್ ॥

ಯಾರೊಬ್ಬರಾಗಲಿ ಎರ್ರಿತಾತನನು ಸ್ಮರಿಸಲಾಗೆ ಜನರುದ್ಧಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

|| ೧೭ ||

ತಾತನ ಸೇವೆಯ ಗೈಯ್ಯುತಲಿದ್ದರು ಬೆಂಗ್ಳೂರ್‌ಸ್ವಾಮಿ ನಿರಂಜನರು |
ಪ್ರಥಮ ದರ್ಜೆಯಲಿ ಗೊರಪ್ಪನವರಿಗೆ ತಾತನ ದರುಶನ ಪಡೆಸಿದ್ದರು ||
ಪುತ್ರರಾಗಿದ್ದ ಶ್ಯಾಮಣ್ಣನವರು ತಂದೆಯ ಮಾರ್ಗದಿ ನಡೆದಿದ್ದರು |
ಶಕ್ತಿಮೀರಿ ರಚನಾತ್ಮಕ ಕಾರ್ಯವ ಸಂಪೂರ್ಣದಿಂದಲಿ ಗೈದಿದ್ದರು ||
ಸುತ್ತುತ ಬರುತಲಿ ರೈಲು ಪ್ರಯಾಣದಿ ಅಲ್ಲಾ ಸ್ವಾಮಿಯು ತಿಳಿಸಿದರು |
ತಾತನ ಸಗುಣ ಸ್ವರೂಪವ ತೋರಲು ಜೇಳ್ಗಿಗುರ್ಕಿಗ್ಹೆರ ಹೇಳಿದರು ||
ಈ ತೆರದೊಳಗೆ ಜೇಳ್ಗಿಗುರ್ಕಿಯಲಿ ಯಾರು ಸಿಕ್ಕದಲೆ ಮರುಗಿದರು |
ಇತ್ತನೋಡು ಎಂದು ತಾತಯ್ಯನವರು ಸಮಾಧಿಯಿಂದ ಮಾತಾಡಿದರು ||

|| ಚಾಲ್‌ವುಡನ್ ||

ಅಂದಿನ ದಿನದಿಂದ ಶ್ಯಾಮಣ್ಣನವರು ಮಠದ ಕಾರ್ಯದೊಳು ತೊಡಗಿರಲು |
ಚಂದದಿ ಊರಿನ ಜನರ ಕೂಡಿಕೊಂಡು ದಿನ, ದಿನ ಮಠವೃದ್ಧಿಯ ಗೊಳಲು ||
ಬಂದಿತು ಮೃತ್ಯುವು ಶ್ಯಾಮಣ್ಣನವರಿಗೆ ತಾತನ ಧ್ಯಾನದಿ ಇರುತಿರಲು |
ಬಂದರು ದಕ್ಷಿಣದೇಶಪವಾಡದ ರಾಮಲಿಂಗಸ್ವಾಮಿ ಶೀಘ್ರದೊಳು ||

|| ಚಿಕ್ಕವುಡನ್ ||

ಪರಿಹರಿಸಿ ಮೃತ್ಯುವಿನ ಕೋಟಲೆಯನ್ನು ಭರದಿ |
ಕರುಣದಿ ಹತ್ವರುಷ ಆಯುಷ್ಯಕೊಟ್ಟರು ಕ್ರಮದಿ ||
ಮರಳಿ ಜೀವಿಸಿದರು ಈ ಪವಾಡಪುರುಷನ ದಯದಿ |
ಗುರು ಚರಣಕೆ ನಮಿಸಿದರು ಶ್ಯಾಮಣ್ಣನವರತಿಶಯದಿ ||

|| ಗುಲ್‌ವುಡನ್ ||

ಮೆರೆವ ಬೆಂಗ್ಳೂರು ನಗರದೊಳಗೆ |
ಇರುವ ಬಸೆಟ್ಟಿ ಪೇಟೆಯೊಳಗೆ ||
ಇರದೆ ಶಿಖರ ರಾಮಲಿಂಗೇಶ್ವರಗೆ |
ಕರೆಸಿ ಶ್ಯಾಮಣ್ಣರ ಶಿಖರ ಪ್ರತಿಮೆಗಳ ರಚಿಸಲು ಭರದೊಳಗೆ ||

|| ಶ್ಲೋಕ ||

ಇರಿಸಿ ಬೆಂಗ್ಳೂರ್ ರಾಮಲಿಂಗಸ್ವಾಮಿ ದೇವಾಲಯದೊಳು |
ಎರ್ರಿತಾತನ ರಾಮಲಿಂಗಸ್ವಾಮಿ ವಿಗ್ರಹ ಜೊತೆಯೊಳು ||

|| ಚಾಲ್ ||

ಪೊರೆಯುತಲಿರುವರು ಎರ್ರಿತಾತಯ್ಯನು ಶ್ಯಾಮಣ್ಣೋರ್ವಂಶವ ಪರಂಪರಾ |
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ||

|| ೧೮ ||

ಪಾರು ಪತ್ಯವನು ಮಾಡುತ ಬಸಯ್ಯ ಮಠದೊಳಗೆ ತಾನಿರುತಿದ್ದ |
ಯಾರು ಇಲ್ಲ ಎನ್ನ ಸಮಾನರೆನ್ನುತ ಹೆಮ್ಮೆನಿಂದ ತಾ ಮೆರೆದಿದ್ದ ||
ಪರಸ್ತ್ರೀಯೊಬ್ಬಳ ಕೂಡುತ ಮಠದೊಳು ನೀಚ ಕೃತ್ಯದೊಳು ತೊಡಗಿದ್ದ |
ಪರಮ ಭಕ್ತಿಯೊಳು ಮಠದೊಳು ಬಂದಂಥ ಭಕ್ತನಿಗೆ ಪರಕೆಲಿ ಹೊಡೆಸಿದ್ದ ||
ಪರಕೆಲಿ ಹೊಡೆದಿದ್ದ ಮೂರು ದಿನಗಳಲ್ಲೆ ಯಮರಾಯ ಇವಳನು ಕೊಂಡೊಯ್ದ |
ಊರಿನ ಜನಗಳು ಬಸಯ್ಯನ ಬಯ್ಯಲು ಮಠದಿಂದ್ಹೊರಗಡೆ ಹೊರಟೋದ ||
ಅರಿಯಿರಿ ಎರ್ರಿತಾತನ ಮಹಿಮೆಲಿ ಮಠದ ಕಾರ್ಯಗಳು ನಡೆದು ಸದಾ |
ಬೀರುತ ಸುತ್ತಲು ಜ್ಯೋತಿ ಪ್ರಕಾಶವು ತಿಮಿರ ಪತಂಗವು ನಶಿಸಿಮುದಾ ||

|| ಚಾಲ್‌ವುಡನ್ ||

ಒಂದು ಪವಾಡವ ಚಂದದಿ ಪೇಳುವೆ ಮಂದಹಾಸದೊಳು ತಿಳಿರೆಲ್ಲ |
ತಂದು ತುಮ್ಕೂರಿನ ಚಕ್ಲಿಯನ್ನು ಶ್ರೀ ರಾಮಾವಧೂತರು ಕೊಟ್ಟರಲ್ಲಾ ||
ಚಂದದಿ ಕಾಶಿಯ ತೀರ್ಥ ಬರಲಿ ಎಂದು ಎರ್ರಿತಾತ ಪೇಳಿದರಲ್ಲಾ |
ಬಂದಿತು ಕಾಶಿಯ ತೀರ್ಥವು ಅಲ್ಲಿಗೆ, ಚಕ್ಲಿ ತಿಂದು ತೇಗಿದರಲ್ಲಾ ||

|| ಚಿಕ್ಕವುಡನ್ ||

ಯುಗ ಯುಗದಿ ಮಹಾತ್ಮರು ಜನ್ಮವೆತ್ತಿ ಬರುತಿಹರು |
ಅಘವೆಂಬ ಪಾಪಗಳ ರಾಶಿಯನ್ನು ಕಳೆದಿಹರು ||

ಜಾಗ್ರತೆಯನುಗೊಳಿಸುವ ಯೋಗಿವರ್ಯರಾಗಿಹರು ।
ರಾಗದ್ವೇಷವ ಕಳೆಯುತ ಧರೆಯಲಿ ಮೂಗರಂತಿಹರು ॥

॥ ಗುಲ್ ವುದನ್ ॥

ಸತ್ತ ಎಮ್ಮೆ ಕರುವಿಗ್ಪ್ರಾಣ ಕೊಟ್ಟು ।
ಮತ್ತೆ ಎಮ್ಮೆ ಹಾಲು ಕುಡಿಸಿ ಕೊಟ್ಟು ॥
ಭಕ್ತ ಚಿಂತಾಮಣಿ ಬಿರುದುಂಟೂ ।
ಸೂಕ್ತವಾದ ಘನ ಪವಾಡಗಳನು ಭಕ್ತರ ಮುಂದಿಟ್ಟು ॥

॥ ಶ್ಲೋಕ ॥

ಶಕ್ತ ಎರ್ರಿತಾತ ಭಕ್ತರಿಗೆ ಕರುಣ ರಸವನೆತೋರುತಾ ।
ಮುಕ್ತಿ ಮಾರ್ಗದ ಮೂಲ ತೋರಿಸಿ ಸೂಕ್ತದೊಳು ಜಯ ಗೊಳಿಸುತಾ ॥
ಪರಮ ಭಕ್ತಿಯೊಳು ಧ್ಯಾನಿಸಿ ಭಕ್ತರು ತಾತಯ್ಯ ಕೊಡುವನು ವರಪೂರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲಿಸುತ್ತಿರುವರು ನಿರಂತರಾ ॥

॥ ೧೯ ॥

ಇತ್ತರಮರವಾಣಿ ರಾಮಲಿಂಗಸ್ವಾಮಿ ಮಲ್ಲಪ್ಪನ್ ಗುಡ್ಡ ವಿಚಾರದಲಿ ।
ಖ್ಯಾತಿಯ ಪೊಂದ್ವದು ದಕ್ಷಿಣ ದೇಶದಿ ಕದರಿಗಾಂ ಕ್ಷೇತ್ರದ ತೆರದಲ್ಲಿ ॥
ಈ ತೆರ ನುಡಿಯಲು ಒಂದು ಭೋಗ ಋಷಿ ಪಳನಿ ಬಿಟ್ಟು ದಕ್ಷಿಣ ಕಡೆಲಿ ।
ನೂತನ ಮಂಟಪ ರಚಿಸಿ ಪಾದಗಳ ಸ್ಥಾಪನೆಮಾಡಿ ವಿಶೇಷದಲಿ ॥
ಶಾಸ್ತ್ರರೀತಿ ದಂಢಾಯುಧ ಪಾಣಿಯ ಸಿದ್ಧಿಸಿ ತಂಜಾವೂರಿನಲಿ ।
ಅತಿಶಯ ವಿಗ್ರಹ ಸಿದ್ಧವಾಗಿಸುತ ಸಿದ್ಧರ್ ಸ್ವಾಮಿಯ ನೇತೃತ್ವದಲಿ ॥
ಇತ್ತು ಸಾವಿರದ ಒಂಭೈನೂರರ ಅರವೊತ್ತೊಂದನೆ ಇಸವಿಯಲಿ ।
ಮತ್ತೆ ಜ್ಯೇಷ್ಟಮಾಸ ಶುದ್ಧ ಪಂಚಮಿಲಿ ಸ್ಥಾಪಿಸಲವ್ಯತ ಹಸ್ತದಲಿ ॥

॥ ಚಾಲ್ ವುದನ್ ॥

ಪ್ರತಿ ಪೌರ್ಣಮಿಯ ವಿಜಯದಶಮಿಯಲಿ ತಾತನ ಪಲ್ಲಕ್ಕಿ ಬರುತಿಹುದು ।

ಇಟ್ಟರು ಶ್ರೀಷ್ಟದಿ ರುದ್ರಾಭಿಷೇಕವ ಮೃತ್ಯುಂಜಯ ಜಪ ನಿಯಮದಲಿ ।
ಕೊಟ್ಟರು ಅತಿಶಯ ದಾನ ಧರ್ಮಗಳ ದಾಸೋಹ ನಡೆಸುತ ಮಠದಲ್ಲಿ ॥
ಇಷ್ಟರ ಮೇಲಿಲೆ ಎರ್ರಿ ತಾತನಿಗೆ ತ್ರಿಕಾಲಸ್ನಾನ ತಣ್ಣೀರಿನಲಿ ।
ತಟ್ಟಿಲು ಶೀತವು ತಾತನಿಗಾಕ್ಷಣ ಬಂದು ಶಾಂತದೇವ ಕೊಠಡಿಯಲಿ ॥
ಬಿಟ್ಟು ಬಿಡಿಸಿರಿ ತಣ್ಣೀರು ಸ್ನಾನವ ಎಂದು ಪೇಳೆ ಪ್ರತ್ಯಕ್ಷದಲಿ ।
ಥಟ್ಟನೆದ್ದು ಕರ್ಪೂರ ಹಚ್ಚಿ ಶ್ರೀ ತಾತನ ಮೂರ್ತಿಗೆ ಎರಗುತಲಿ ॥

॥ ಚಾಲೂದರ್ಾ ॥

ಬೆಳಗಾಗಲೆದ್ದು ಕುಂಭ ಕೋಣ ಶ್ರೀ ಶಾಂತದೇವ ಬಂದು ಮಠದಲ್ಲಿ ।
ಒಳ್ಳೆ ಮುಹೂರ್ತದಿ ಯಜ್ಞೇಶ್ವರನನು ಪ್ರತಿಷ್ಠೆ ಗೈಯ್ಯುತ ಶಾಂತಿಯಲಿ ॥
ತೊಳೆಯಿಸಿ ಹಂಡೆಯ ಬಿಸಿ ನೀರು ಕಾಯಿಸಿ ಸ್ನಾನಮಾಡಿಸಿರಿ ಎನ್ನುತಲಿ
ಕೇಳಿ ವಿಚಾರವ ಟ್ರಸ್ಟಿಗಳೆಲ್ಲರು ಬಲು ಸಂತೋಷವ ಪಡೆಯುತಲಿ ॥

॥ ಚಿಕ್ಕೂದರ್ಾ ॥

ಒಂದು ಸಾವಿರ್ದೊಂಭೈನೂರ ಅರವತ್ನಾಲ್ಕು ಇಸವಿಯಲಿ ।
ಬಂದರು ಉರವಕೊಂಡೆ ಅಮಲ್ದಾರರು ಕಾರಿನಲಿ ॥
ಅಂದು ನಡೆದರು ಗುಡ್ಡಕ್ಕೆ ಎಲ್ಲರು ಒಮ್ಮನದಲಿ ।
ಬಂದು ಬಿದ್ದಿತು ಆಗ ಜೀಪ್ಕಾರು ಭಾವಿಯಲಿ ॥

॥ ಗುಲ್‌ವುಡನ್ ॥

ಎರ್ರಿತಾತಯ್ಯ ತಾನೆ ಬಂದು ।
ಪೀರ ಸಾಬಿಗ್ಹಸ್ತ ತೋರಿಸಿದ್ದೂ ॥
ಯಾರಿಗೂ ಅಪಾಯವಿಲ್ಲೆಂದು ।
ಪಾರಾದರು ಆ ಕೂಡಲೆ ಎಲ್ಲರು ತಾತನ ದಯದಿಂದು ॥

॥ ಶ್ಲೋಕ ॥

ತಾತನಾಗಿ ಬಂದು ಭಕ್ತರಿಗೆ ನೀತಿ ಮಾರ್ಗವ ತಿಳಿಸುತಾ ।
ಮಾತಿನರ್ಥವ ತಿಳಿಯದವರೂ ಮೂರ್ಖತನದೊಳು ನಡೆಯುತಾ॥

ಜ್ಯೋತಿ ಪ್ರಕಾಶವು ಸುತ್ತಲು ಗುಡ್ಡಕ್ಕೆ ದೂರದಿಂದಲೇ ಕಾಣುವುದು ||
ಅತಿಶಯ ಭಕ್ತಿಲಿ ದಂಡಾಯುಧ ಪಾಣಿಯ ಪೂಜಿಸಿಷ್ಟಾರ್ಥವ ಪಡೆಯುವುದು |
ಸತ್ಯಸಿಡಿದ ಸದ್ಭಕ್ತ ಸಮೂಹವು ಅಪಾಯದಿಂ ಪಾರಾಗಿಹುದು ||

|| ಚಿಕ್ಕೋಡರ್ಾ ||

ಉಮಾಪತಯ್ಯನವರು ತಾತನ ಧ್ಯಾನಿಸುತ್ತಿರಲು |
ಆ ಮಹಿಮೆಯ ದಯದಿಂ ಸಕಲ ಐಶ್ವರ್ಯದೊಳಿರಲು ||
ನೇಮದಿಂದ ಐಶ್ವರ್ಯವ ತಾತನಿಗರ್ಪಿಸಿ ಇರಲು |
ಈ ಮಹಿಮರು ತೊರೆದಿಹ ಶರೀರ ಲಿಂಗವಾಗಿರಲು ||

|| ಗುಲ್ಲೂರ್ಡಾ ||

ತಾತನ ದರುಶನ ಪಡೆದವರು |
ನೀತಿವಂತರೆನ್ನಿಸಿ ಇರುತಿಹರು ||
ಮತಾಂತರ ಕೋಟಲೆ ಕಳೆದವರೂ |
ಸೂತ್ರವ ತಿಳಿಯುತ ಎರ್ರಿಯ ತಾತನ ಧ್ಯಾನಿಸಿ ಇದ್ದವರು ||

|| ಶ್ಲೋಕ ||

ಉಮಾಪತಯ್ಯನ ಸೇವೆಯಿಂದಲಿ ಕ್ಷೇತ್ರ ಪೂರ್ಣತೆಗೊಂಡಿತು |
ಅಮಮ ಪುಣ್ಯಪ್ರದೀಪರಾಗಲು ಪೂರ್ವ ಸೇವೆಯು ಫಲಿಸಿತು ||

|| ಚಾಲ್ ||

ಕರುಣಾಕರ ಶ್ರೀ ಎರ್ರಿಸ್ವಾಮಿಗಳ ಭಕ್ತಿಯಿಂದ ಜನರುದ್ಧಾರ |
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ||

|| ೨೦ ||

ಅಷ್ಟ ಗ್ರಹಂಗಳು ಒಟ್ಟಿಗೆ ಕೂಡಲು ಭಾರತ ಪ್ರಜೆಗಳು ಭೀತಿಯಲಿ |
ಪುಟ್ಟಿತು ಸಾವಿರದೊಂಭೈನೂರರ ಅರವತ್ತೆರಡನೆ ಇಸವಿಯಲಿ ||

॥ ಚಾಲ್ ॥

ಪರಮ ಭಕ್ತಿಯೊಳು ಮಠದ ಕಾರ್ಯವನು ಶ್ಯಾಮಣ್ಣ ಮಾಡುತ ಕಾರ್ಯ ಭರಾ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೨೧ ॥

ಪೃಥ ಮಹದೇವನ ಮಂದಿರದಂತೆಯೆ ಯೋಗ ಮಂಟಪವು ಸ್ಥಾಪಿಸಿದೆ ।
ಧೃಢ ಮನಶಾಂತಿಲಿ ಶಿವಾನುಭವದ ಪ್ರಶಾಂತ ಸೌಖ್ಯವು ನೀಡುತಿದೆ ॥
ನೋಡಲು ಶ್ರೀ ಮಠ ಮೇಲ್ಗಡೆ ಗೋಪುರ ಮುಗಿಲು ಮುಟ್ಟುವಂತೆ ಕಾಣುತಿದೆ
ಮೋಡರಹಿತ ನಭ ಬಿದಿಗೆ ಚಂದ್ರನಂತೆ ಮಠವು ದಿನೇ ದಿನೇ ಬೆಳಗುತಿದೆ ॥
ನಾಡಿನ ಜನಗಳು ನೋಡಲೀಗ ಮಠ ಶೋಭಾಯಮಾನದಿಂದಿರುತಲಿದೆ ।
ಮೂಡುತಲಿದೆ ಮಠ ಕಾರ್ಯ ಗೌರವವು ಎ. ಜಿ. ಶ್ಯಾಮಣ್ಣರ ಸತ್ವವಿದೆ ॥
ಕೂಡಿಸುಯ್ಯಾಲಿಲಿ ತಾತನ ಮೂರ್ತಿಯ ಯೋಗ ಸಿಂಹಾಸನವಿರುತಲಿದೆ ।
ಮಾಡಿ ಪ್ರತಿಷ್ಠೆಯ ನವಗ್ರಹ ಮಠದೊಳು ನವವಿಧ ಶಾಂತಿಯ ಕೊಡುತಲಿದೆ ।

॥ ಚಾಲ್‌ವುಡನ್ ॥

ಪರಿಪೂರ್ಣರಾದರು ಭಕ್ತ ಬಂಧುಗಳು ಎರ್ರಿ ಸ್ವಾಮಿ ನಂಬಿರಲಾಗಿ ॥
ಮಾರುತೀ ಗುಡಿ ಬೆಂಗ್ಳೂರೊಳು ಸ್ಥಾಪಿಸಿ ರಾಮಲಿಂಗಸ್ವಾಮಿ ಇರಲಾಗಿ ॥
ವರ ಸುಬ್ರಹ್ಮಣ್ಯಸ್ವಾಮಿ ದೇವಾಲಯ ಸಜ್ಜನರಾಯರ್ ರಚಿಸುತಲಾಗಿ ।
ಅರಿಯಿರಿ ಕಲ್ಯಾಣ ಮಂಟಪ ಮತ್ತೆ ನವಗ್ರಹ ಸ್ಥಾಪಿಸಿ ಕ್ರಮವಾಗಿ ॥

॥ ಚಿಕ್ಕವುಡನ್ ॥

ಧರೆಯೊಳಗೆ ಚೇಳ್ಗುರ್ಕಿ ಪುಣ್ಯಕ್ಷೇತ್ರವಾಗಿಹುದು ।
ವರಭಕ್ತರನೇಕರ ಪ್ರವಾಸಿ ಗೃಹ ರಚಿಸಿಹುದು ॥
ಎರ್ರಿತಾತನ ಕೃಪೆಯು ಭಕ್ತರ ಮೇಲಿರುತಿಹುದು ।
ಪರಿಪೂರ್ಣತೆ ಟ್ರಸ್ಟಿಗಳ ಕಾರ್ಯ ನಡೆಸುತಲಿಹುದು ॥

೨೯

॥ ಗುಲ್ ವುಡನ್ ॥

ಧರೆಯೊಳು ಭಕ್ತರ ಭೀಷ್ಟದಂತೆ ।
ಸುರಿಯುತಾ ಅಮೃತವಾಣಿಯಂತೆ ॥
ಪರಮ ಪೂಜ್ಯ ಎರ್‍ರಿತಾತರಂತೆ ।
ತೋರಿ ಭಕ್ತರಿಗೆ ಪವಾಡಗಳನು ಪುಣ್ಯ ಪುರುಷರಂತೆ ॥

॥ ಶ್ಲೋಕ ॥

ಮಾನವನ ತೆರೆ ಮೌನವಾಗಿ ಧರೆಯೊಳುದಿಸುತ ಬಂದರು ।
ಸ್ವಾನುಭವಿಗಳ ಸಂಗದಲ್ಲಿ ಮೌನ ಮುದ್ರೆಯೊಳಿದ್ದರು ॥

॥ ಚಾಲ್ ॥

ಅರಿವನು ತೋರುವ ಗುರು ಎರ್‍ರಿತಾತನ ಹೀರಿ ಅಮೃತದ ಸುಖಸಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೨೨ ॥

ಅಖಿಲ ಭಾರತದ ಶಿವಾನುಭವಕೆ ಮೃತ್ಯುಂಜಯ ಸ್ವಾಮಿ ಮುಖ್ಯಸ್ಥರು ।
ಇಕ್ಕಿ ಮನವನು ದೊಡ್ಡ ಗೌಡಗೆ ಶಿವಾನುಭವ ಪ್ರವಚನ ನಡೆಸೆಂದರು ॥
ಉಕ್ಕುವ ಭಕ್ತಿಯು ಮನದಿ ಗೌಡರಿಗೆ ತಾತನ ಸ್ವಪ್ನದಿ ಕಂಡಿದ್ದರು ।
ತ್ರಿಕರಣ ಶುದ್ಧದಿ ಶೈವ ಪುರಾಣವ ಅದ್ಭುತವಾಗಿಯೆ ಹಾಡಿಹರು ॥
ಪ್ರಕಟಪುರಾಣಾ ಆಸ್ಥಾನ ಪಂಡಿತ ನಾಗೇಶ ಶಾಸ್ತ್ರಿಗಳು ರಚಿಸಿಹರು ।
ಏಕೋ ಭಾವದಿ ಚಿತ್ರದುರ್ಗದ ಮುರುಘರಾಜೇಂದ್ರರು ಬಂದಿದ್ದರು ॥
ಪ್ರಖ್ಯಾತವಾದ ಸುತ್ತೂರು ಮಠದ ಶ್ರೀ ಮಚ್ಛಿವರಾತ್ರೀಶ್ವರರು ।
ಶ್ರೀ ಕರ ಸಿದ್ಧಗಂಗೆ ಮಠಾಧೀಶ್ವರರು ಶಿವಕುಮಾರ ಸ್ವಾಮಿಯರು ॥

॥ ಚಾಲ್ ವುಡನ್ ॥

ನಿರುಪಮ ಮೈಸೂರರಮನೆ ಗವಿಮಠ ಗೌರೀಶಂಕರ ಸ್ವಾಮಿಯರು ।
ಹರುಷ ಪ್ರತಿಷ್ಠಿತ ಕಂಭ ಕೋಣದ ಪೆಂಮಠ ಶಾಂತಸ್ವಾಮಿಯರು ॥

ಧಾರವಾಡ ಗದಿಗಯ್ಯ ಹಿರೇಮಠ ತಾತನ ಪುಣ್ಯವ ಪಡೆದವರು ।
ಮಿರಿದ್ವೈಶ್ವರ್ಯವ ಪಡೆದು ಈ ಮಹಿಮರು ಸುಖಾನುಭವದೊಳಗಿರುತಿದ್ದರು

॥ ಚಿಕ್ಕವುಡನ್ ॥

ಎರ್ರಿತಾತನ ಮರೆಯದೆ ಕೊಳದ ಮಠದ ಸ್ವಾಮಿಯರು ।
ಇರುವಂತ ಬೆಂಗ್ಳೂರಲಿ ಶಾಂತವೀರ ಸ್ವಾಮಿಯರು ॥
ತಿಪ್ಪಿಸ್ವಾಮಿ ಶ್ರೀ ಕೈಲಾಸಾದ್ರಿಮಠದ ಗುರುವರರು ।
ಎರ್ರಿತಾತನ ಪೂರ್ಣ ಕಟಾಕ್ಷವನ್ನು ಪಡೆದವರು ॥

॥ ಗುಲ್‌ವುಡನ್ ॥

ತಾತನಾ ಸಮಾಧಿ ಬಳಿ ಇವರು ।
ಪ್ರೀತಿಲಿ ಸಮಾಧಿಯಾದವರು ॥
ಖ್ಯಾತಿ ಗೊಂಡ ಬೆಂಗ್ಳೂರ್ ಶ್ಯಾಮಣ್ಣನವರು ।
ಜ್ಯೋತಿಯ ತೆರದೊಳು ಕೀರ್ತಿಯ ಗಳಿಸಿ ಲಿಂಗೈಕ್ಯರಾದವರು ॥

॥ ಶ್ಲೋಕ ॥

ಚಂದ್ರಶೇಕರಪ್ಪನವರೇ ಶ್ಯಾಮಣ್ಣನವರ ಪುತ್ರರು ।
ಹಿಂದೆ ಉದಿಸಿದ ಷಣ್ಮುಖಪ್ಪರೆ ದ್ವಿತೀಯ ಪುತ್ರರಿರುವರು ॥

॥ ಚಾಲ್ ॥

ಶಿರಿಸರ್ವ ಭಾಗ್ಯವು ಸುರಿದಂತಿಹುದು ಎರ್ರಿತಾತನ ಸುವಿಚಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೨೩ ॥

ಮಠದ ಕಾರ್ಯಕೆ ಟ್ರಸ್ಟ್ ಕಮಿಟಿಯು ಘನ ಸದಸ್ಯರೆಸರನು ಕೇಳಿ ಜನ ।
ದಿಟ ಭಕ್ತಿಯ ಶ್ರೀ ಪಾಟೀಲ್‌ಭೀಮಣ್ಣ ಗೌಡ ನಡೆಸುತ ಕಾರ್ಯವನಾ ॥
ಶ್ರೇಷ್ಠವೆಂದೆನಿಸಿದ ಸಿದ್ಲಿಂಗೇ ಗೌಡರ ಚಂದ್ರಪ್ಪಾಳಿ ಕಾರ್ಯದಿ ಗಮನಾ ।

ದಿಟ್ಟದಿ ನಡೆವರು ವುಕ್ಕೂರು ನಾಗಪ್ಪ ರಚನಾತ್ಮಕ ನಿಜ ಕಾರ್ಯವನಾ ॥
ಗಟ್ಟಿ ಘನತೆ ಪಂಪಣ್ಣ ಗೌಡರತಿ ಮಾಡ್ಪರು ಭಕ್ತರ ಸೇವೆಯನಾ ।
ಇಷ್ಟದಿಂ ನಡೆಸಿಹರ್ ಆದವಾನಿ ಬುಸ್ಸಣ್ಣ ಭಕ್ತಿ ಕೈಂಕರ್ಯವನಾ ॥
ಪಟುತರವೆನಿಸಿದೆ ಜೋಳದ ರಾಶಿ ದೊಡ್ಡಣ್ಣ ಗೌಡರ ಭಕ್ತಿಯನಾ ।
ಪುಟ ವಿಕ್ಸಿತಲಿದೆ ತೋಗರಿ ವೀರಪ್ಪನ ಧರ್ಮದರ್ಶಿಯಾ ಪಾತ್ರವನಾ ॥

॥ ಚಾಲ್‌ವುಡನ್ ॥

ಯದುಕುಲವಂಶ ಶಿಖಾಮಣಿ ಚಾಮೇಂದ್ರರಿತ್ತ ಸಂದೇಶವನು ।
ಶೋಧನೆ ಮಾಡುತ ಎರ್ರಿಯತಾತನ ಪವಾಡಗಳ ವಿಸ್ತಾರವನು ॥
ಇದ್ದ ವಿಚಾರವ ಶ್ರದ್ಧೆಲಿ ಗ್ರಹಿಸುತ ಚಂದ್ರಯ್ಯನವರೀ ಚರಿತೆಯನು ॥

॥ ಚಿಕ್ಕವುಡನ್ ॥

ಅನು ದಿನವು ಭಕ್ತ ಜನ ತಿಳಿಸಿದಂತ ವೃತ್ತಾಂತ ।
ಘನ ಮಹಾತ್ಮನಾದ ಎರ್ರಿತಾತನ ಸಚ್ಚರಿತ ॥
ಕನ್ನಡಿಯಂತೆ ಪರಿಶುದ್ಧ ಪವಾಡಗಳ ವಿಂತಾ ।
ಕನ್ನಡನಾಡು ಬಳ್ಳಾರಿಯಲ್ಲಿ ಪ್ರಖ್ಯಾತ ॥

॥ ಗುಲ್‌ವುಡನ್ ॥

ಪ್ರತೀಯೊಂದು ಅಮಾವಾಸ್ಯೆಯಲ್ಲಿ ।
ಸುತ್ತ ಜನ ಬರುತಾ ದಿನದಲ್ಲಿ ॥
ತಾತನ ಪೂಜೆಯು ಗೈಯ್ಯುತಲಿ ।
ಈ ತೆರ ವಿಶೇಷದಿ ಜಾತ್ರೆಯು ನಡೆವುದು ಪ್ರತಿಯೊಂದ್ವರುಷದಲಿ ॥

॥ ಶ್ಲೋಕ ॥

ಬಂದ ಭಕ್ತರಿಗೆ ತೃಪ್ತಿಕರ ದಾಸೋಹ ಮಠದೊಳು ನಡೆವುದು ।
ಚೆಂದದಿಂದಲಿ ವಸತಿಗೃಹಗಳು ಬಂದ ಜನರಿಗೆ ಇರುವುದು ॥

॥ ಚಾಲ್ ।

ಜರುಗುತ ಶಿವಾನುಭವದ ಪ್ರವಚನವು ಮಂದಿರದಲಿ ಪ್ರತಿ ಬುಧವಾರ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವರು ನಿರಂತರಾ ॥

॥ ೨೪ ॥

ವರುಷಂ ಪ್ರತಿಯೊಳು ಜಾತ್ರೆಯು ನಡೆವುದು ಜ್ಯೇಷ್ಠ ಶುದ್ಧ ಷಷ್ಟಿ ತಿಥಿಯಲ್ಲಿ।
ಜರುಗುವುದೆರ್ರಿಯ ತಾತನ ವಿಗ್ರಹ ವಿಭವ ರಥೋತ್ಸವ ನಡೆಯುತಲಿ ॥
ನೆರೆಯುವರ್ ನಾಲ್ಕು ದಿಕ್ಕಿನ ಭಕ್ತರು ಹರುಷದಿಂದ ಚೇಳ್ಳಗುರ್ಕಿಯಲಿ।
ಬರುವಂತ ಭಕ್ತರು ಜೀವ ಸಮಾಧಿಯ ದರುಶನ ಪಡೆವರು ನಿತ್ಯದಲಿ ॥
ನೀರಿನ ಭಾವಿಯ ಮಹಾಬಲೇಶ್ವರ ಧಣಿಗಳು ತೆಗೆಸಿಹರ್ ಭಕ್ತಿಯಲಿ।
ಎರ್ರಿಯ ತಾತನ ಜೀವಿನ ಚರಿತ್ರೆಯ ಚೆನ್ನಬಸವೇಶ್ವರು ರಚಿಸುತಲಿ ॥
ಸುರ ಚಿರ ಭಕ್ತರನೇಕರ ಹೆಸರನು ಬರೆಯಲಾಗದೀ ಪದದಲ್ಲಿ।
ಕರಗಳ ಮುಗಿಯುವೆ ತಪ್ಪುಗಳಿದ್ದರೆ ಮನ್ನಿಸಿರೆನ್ನುತ ಪ್ರಾಜ್ಞರಲಿ ॥

॥ ಚಾಲ್‌ವುಡನ್ ॥

ಮಂಗಳ ಮಂಗಳ ಜಯಶುಭ ಮಂಗಳ ಮಂಗಳಾಂಗ ಎರ್ರಿತಾತನಿಗೆ।
ಮಂಗಳವಾಗಲಿ ಶ್ರೀ ಹರಿದಾಸರ ಲಾವಣಿ ಸಾಹಿತ್ಯ ಮಂಡಲಿಗೆ ॥
ರಂಗನ ಕೃಪೆಯಲಿ ಗುರು ಪುಟ್ಟನಂಜಣ್ಣ ಮೂರಶೆಟ್ಟಿಯರ ದಯದೊಳಗೆ।
ಜಂಗಮ ಗುರುವರ ಎರ್ರಿತಾತಯ್ಯನ ಪುಣ್ಯ ಚರಿತೆ ಮಂಗಳವಾಗಿ ॥

॥ ಚಿಕ್ಕವುಡನ್ ॥

ಗುರು ಎರ್ರಿತಾತಯ್ಯನ ಸ್ಮರಿಸಿ ನಿರುತ ಮನದಲ್ಲಿ।
ಅರುವಿರಿಸಿ ಬರೆಸಿಹರು ಪದವು ಎನ್ನ ಕರದಲ್ಲಿ ॥
ವರ ಹಿರಿತರಿಗೆರಗುತ ಮನ್ನಿಸೆನುತ ಕೃಪೆಯಲ್ಲಿ।
ಮರು ಮುದ್ರಣದಲ್ಲಿ ತಿದ್ದಿಕೊಳ್ಳಿ ಭಕ್ತಿಯಲಿ ॥

॥ ಗುಲ್‌ವುಡನ್ ॥

ಅರಿತಷ್ಟು ಬರೆದಿಹ ಪದವಿದನೂ ॥
ಎರ್ರಿತಾತಯ್ಯನೆ ಬರೆಸಿದನೂ ॥

ಬರೆದು ಸುಬ್ಬಣ್ಣ ಹಾಡಿ ಇದನೂ ।
ವರಿವರು ಶೇಷಣ್ಣ ರಾಜಣ್ಣರೀಪದ ಸ್ಮರಿಸುತ ಗುರುವನ್ನು ॥

॥ ಶ್ಲೋಕ ॥

ಕನ್ನಡದ ನಾಡು ಬಳ್ಳಾರಿ ಜಿಲ್ಲೆಯ ಚೇಳ್ಳಗುರ್ಕಿ ಗ್ರಾಮದಿ ।
ಕನ್ನಡದ ಜನ ಹೆಮ್ಮೆ ಪಡುವ ಪವಾಡ ಮೆರೆದಿಡೆ ಸತ್ಯದಿ ॥

॥ ಚಾಲ್ ॥

ಎರ್ರಿ ತಾತಯ್ಯನ ಮಹಾತ್ಮೆ ಲಾವಣಿ ಕನ್ನಡ ಭಾಷಾಲಂಕಾರ ।
ಪರಿಪೂರ್ಣತೆಯಲಿ ಭಕ್ತರ ಬಯಕೆಯ ಸಲ್ಲಿಸುತ್ತಿರುವುದು ನಿರಂತರಾ ॥

ಮಂಗಳಂ



ಲಾವಣಿ. ಸಿ. ಸುಬ್ಬಣ್ಣನವರು
ಬೆಂಗಳೂರು

# ಕನ್ನಡ ಲಾವಣಿ ವಿದ್ವಾನ್. ಶ್ರೀ ಸಿ. ಸುಬ್ಬಣ್ಣನವರ ಸಂಕ್ಷಿಪ್ತ ಪರಿಚಯು

ಇವರು ಬೆಂಗಳೂರು ನಗರದ ಶ್ರೀ ಚನ್ನರಾಯಪ್ಪನವರ ಜ್ಯೇಷ್ಠ ಪುತ್ರರಾಗಿ ಜನಿಸಿದರು. ಈಗ್ಗೆ ಇವರಿಗೆ ಸುಮಾರು ಅರವತ್ತೈದು ವಯಸ್ಸಾಗಿರುತ್ತೆ. ಇವರು ಬೆಂಗಳೂರು ನಗರದ, ನಗರ್ತರ ಪೇಟೆ, ಅಪ್ಪಾಜಿರಾವ್ ಬೀದಿಯ ನಿವಾಸಿಗಳು.

1935 ನೇ ಇಸವಿಯಲ್ಲಿ, ಇವರು ನಾರಾಯಣ ಶೆಟ್ಟಿ ಪೇಟೆಯಲ್ಲಿದ್ದ ತುರಾಬಿರುದಾಂಕಿತ, ವಾಕ್‌ಚಾತುರ್, ಕವಿರಾಟ್ ಎಂ. ಮರಿಯಪ್ಪನವರ ಶಿಷ್ಯ ಮಂಡಲಿಯಲ್ಲಿ ಸೇರಿ ಲಾವಣಿಗಳನ್ನು ಅಭ್ಯಾಸಮಾಡಿಕೊಂಡು, ತುರಾಮಂಡಲಿ ಯವರ ಜೊತೆಯಲ್ಲಿ, ತುರಾ-ಕಲ್ಗಿ ವಾದದಲ್ಲಿ ಭಾಗವಹಿಸುತ್ತಿದ್ದರು. ಅರಮನೆ ಪಂಡಿತರಾದ ಶ್ರೀ ಶಿವಮೂರ್ತಿ ಶಾಸ್ತ್ರಿ ; ಡೆಪ್ಯುಟಿ ಕಮಿಷನರ್ ರಣಜೋಡ್‌ಸಿಂಗ್ ಇನ್ನೂ ಮುಂತಾದವರ ಘನ ಅಧ್ಯಕ್ಷತೆಯಲ್ಲಿ ಇವರ ಗುರುಗಳಾದ ಶ್ರೀಮರಿಯಪ್ಪ ನವರ ಶಿಷ್ಯರಾದ ಮಾರಶೆಟ್ಟಪ್ಪನವರ ಜೊತೆಯಲ್ಲಿ ಖಡ ನುಡಿಸಿಕೊಂಡು ಹಾಡಿ, ಅವರೆಲ್ಲರ ಬಹುಮಾನಪೂರಿತವಾದ ಮೆಚ್ಚುಗೆಯನ್ನು ಪಡೆದಿರುವರು.

ಅನಂತರ, ಶ್ರೀಯುತ. ಐ. ಕೆ. ಪುರುಷೋತ್ತಮ ನಾಯ್ಡುರವರ ಒತ್ತಾಯದ ಮೇಲೆ ನ್ಯಾಷನಲ್ ವಾರ್ ಫ್ರಂಟಿಗೆ ಲಾವಣಿ ಪ್ರಚಾರಕರಾಗಿ ಸೇರಿ, ನಗರ ರಕ್ಷಣಾ ಲಾವಣಿಯನ್ನು ಪ್ರಚಾರ ಮಾಡಿದರು.

1944 ನೇ ಮಾರ್ಚ್‌ತಿಂಗಳು ೨೨ ನೇ ತಾರೀಖು, ಘನಸರ್ಕಾರದವರು ಪುರಭವನದಲ್ಲಿ ಲಾವಣಿ ಸ್ಪರ್ಧೆಯನ್ನು ಏರ್ಪಡಿಸಿದ್ದರು. ಅದರಲ್ಲಿ ಇವರೂ ಸಹ ಭಾಗವಹಿಸಿ, ಸ್ವಂತ ರಚಿಸಿದ ಲಾವಣಿಯನ್ನು ಹಾಡಿ, ಮೊದಲನೇ ಬಹುಮಾನ ವಾದ ಒಂದು ಬಂಗಾರದ ಪದಕವನ್ನು ದಿವಾನ್. ಶ್ರೀ. N. ಮಾಧವರಾಯರ ಅಮೃತ ಹಸ್ತದಿಂದ ಪಡೆದಿರುವರು. ಶ್ರೀ ಜಗದ್ಗುರು ನಿಡುಮಾಮಿಡಿ ಸ್ವಾಮಿಗಳು, ಎಸ್. ಸಿದ್ದಯ್ಯನವರು, ಮುಂತಾದವರು ಇವರಿಗೆ ಅನೇಕ ಕಪ್ಪುಗಳನ್ನೂ ಪದಕ ಗಳನ್ನೂ ಕೊಟ್ಟು ಗೌರವಿಸಿದ್ದಾರೆ.

ನಗರದ A. R. P. ಸಂಸ್ಥೆಯನ್ನು ಸೇರಿ ಅನೇಕ ಲಾವಣಿಗಳನ್ನು ಸ್ವಂತ

ರಚಿಸಿ, ಸಿಟಿ. Y. M. C. A ಸಭಾಂಗಣದಲ್ಲಿ ಹಾಡಿರುತ್ತಾರೆ. ಕೆಲವು ಭಾವಚಿತ್ರಗಳು ಸರ್ಕಾರದ ಆಶ್ರಯದಲ್ಲಿರುತ್ತವೆ.

ಇವರು "ಗೋಹತ್ಯ ನಿರೋಧ" ಎಂಬ ಲಾವಣಿಯನ್ನು ಸ್ವಂತ ಬರೆದು, ಇದನ್ನು ಪುಸ್ತಕಗಳಾಗಿ ಅಚ್ಚುಮಾಡಿಸಿ, ಕರ್ನಾಟಕದ ಅನೇಕ ಗ್ರಾಮಗಳಿಗೆ ಹೋಗಿ, ಈ ಪುಸ್ತಕಗಳನ್ನು ಉಚಿತವಾಗಿ ಹಂಚಿ ಲಾವಣಿ ಪ್ರಚಾರ ಮಾಡಿರುತ್ತಾರೆ. ಮಾನ್ಯ. ಶ್ರೀ K. ಹನುಮಂತಯ್ಯನವರು ನಾಡಿನ ಮುಖ್ಯ ಮಂತ್ರಿಗಳಾಗಿದ್ದಾಗ ಕನ್ನಡ ಸಂಸ್ಕೃತಿ ಪ್ರಚಾರಕರಾಗಿ ಕೆಲಸ ಮಾಡಿರುವರು.

ನಮ್ಮದೇಶದ ಸಂಗೀತ ನಾಟಕ ಅಕಾಡಮಿಯಲ್ಲಿ ಇವರ ಸಂಘವು "ಶ್ರೀ ಹರಿದಾಸರ ಲಾವಣಿ ಸಾಹಿತ್ಯ ಸಂಘ" ಎಂಬುದಾಗಿ ರಿಜಿಸ್ಟರ್ ಆಗಿದೆ. ಇವರು ಬೆಂಗಳೂರು ಆಕಾಶವಾಣಿಯಲ್ಲೂ ಸಹ ಆಗಾಗ್ಗೆ ಲಾವಣಿಗಳನ್ನು ಹಾಡುತ್ತಿರುತ್ತಾರೆ.

ಈಗ ಚೇಳ್ಳಗುರ್ಕಿಯ ಮಹಿಮರಾದ ಮಹಾ ಪುರುಷ ಶ್ರೀ ಎರ್ರಿತಾತಯ್ಯ ನವರ ಜೀವನ ಚರಿತ್ರೆಯನ್ನು, ಈ ಮಠದ ಟ್ರಸ್ಟ್ ಕಮಿಟಿಯವರ ಆದೇಶದ ಪ್ರಕಾರ ಈ ಮಹಾ ಮಹಿಮರ ಲಾವಣಿಯನ್ನು ಸ್ವಂತ ರಚಿಸಿರುವರು.

ಈ ಪ್ರಕಾರವಾಗಿ ಈ ಲಾವಣಿ ಲೇಖಕರೂ, ಗಾಯಕರೂ ಆದ ಶ್ರೀ. ಸಿ. ಸುಬ್ಬಣ್ಣನವರು ನಾಡಿನ ಮೆಚ್ಚುಗೆಯನ್ನು ಪಡೆದು, ಈಗಲೂ ಸಹ ತಮ್ಮ ಶಿಷ್ಯ ಕೂಟದೊಡನೆ ಅನೇಕ ಊರುಗಳಲ್ಲಿ, ಸ್ವಂತ ಊರಿನಲ್ಲಿ, ವಿಶೇಷವಾಗಿ ಭಾಗವತರಾಗಿ ಲಾವಣಿಗಳನ್ನು ಹಾಡುತ್ತಿರುತ್ತಾರೆ.

